॥ ಶ್ರೀಃ ॥

# ತರ್ಕಸಂಗ್ರಹಃ

ಕನ್ನಡ ಸುಬೋಧಿನೀ ವ್ಯಾಖ್ಯಾನ ಸಮೇತ

ಲೇಖಕ :

**ಜಿ. ವಿಷ್ಣುಮೂರ್ತಿಭಟ್ಟ**

ಮೈಸೂರು.

ಬೆಲೆ : ೧ – ೫೦.

# ತರ್ಕಸಂಗ್ರಹಃ

ಕನ್ನಡ ಸುಬೋಧಿನೀ ವ್ಯಾಖ್ಯಾನ ಸಮೇತ

ಲೇಖಕ:

**ಜಿ. ವಿಷ್ಣುಮೂರ್ತಿ ಭಟ್ಟ**

ವ್ಯಾಕರಣ, ತರ್ಕ, ಸಾಹಿತ್ಯ ಕನ್ನಡ ವಿದ್ವಾನ್

ರಾಷ್ಟ್ರಭಾಷಾವಿಶಾರದ

ಅಲಂಕಾರಶಾಸ್ತ್ರ ಸಹಾಯಕೋಪಾಧ್ಯಾಯ

**ಶ್ರೀಮನ್ಮಹಾರಾಜ ಸಂಸ್ಕೃತ ಮಹಾ ಪಾಠಶಾಲಾ,**

ಮೈಸೂರು.



1958

# ಮುನ್ನುಡಿ

ತರ್ಕಶಾಸ್ತ್ರವು ಬೇರೆ ಎಲ್ಲಾ ಶಾಸ್ತ್ರಗಳಿಗೆ ಮಹೋಪಕಾರ ಮಾಡುವುದಾದರೂ ತುಂಬ ಗಹನವಾದ ಶಾಸ್ತ್ರವಾಗಿದೆ. ಮಹರ್ಷಿ ಗೌತಮ–ಕಣಾದರಿಂದ ಬಂದ ನ್ಯಾಯ–ವೈಶೇಷಿಕ ಶಾಸ್ತ್ರಗಳನ್ನು ಒಟ್ಟಾಗಿ ತರ್ಕಶಾಸ್ತ್ರವೆಂದು ಕರೆಯುತ್ತಾರೆ. ನ್ಯಾಯಶಾಸ್ತ್ರದಲ್ಲಿ ಪ್ರಮಾಣವಿಚಾರವೂ ವೈಶೇಷಿಕ ಶಾಸ್ತ್ರದಲ್ಲಿ ಪ್ರಮೇಯ ವಿಚಾರವೂ ಪ್ರಧಾನವಾಗಿವೆ. ತರ್ಕಶಾಸ್ತ್ರವು ಲಕ್ಷಣ–ಪರೀಕ್ಷೆಗಳಿಂದ ತತ್ತ್ವಗಳನ್ನು ಸಮರ್ಥಿಸಿ ತನ್ನದೇ ಆದ ಸಿದ್ಧಾಂತವನ್ನು ಎತ್ತಿಹಿಡಿದಿದೆ.

ಲಕ್ಷಣ-ಪರೀಕ್ಷೆಗಳ ಪರಿಷ್ಕಾರಪಥದಲ್ಲಿ ಕೆಲವು ಪಾರಿಭಾಷಿಕ ಪದಗಳನ್ನೂ ಉಪಯೋಗಿಸಲಾಗಿದೆ. ಹೆಚ್ಚು ಪದಗಳಿಂದ ವಿವರಿಸಬೇಕಾಗಿರುವ ಅರ್ಥದಲ್ಲಿ ಪಾರಿಭಾಷಿಕ ಪದವು ಅಂಕಿತವಾಗಿದೆ. ಹೆಚ್ಚಿನ ಚಿಂತನೆ–ಆವೃತ್ತಿಗಳಿಂದ ಮಾತ್ರ ಪಾರಿಭಾಷಿಕ ಪದಗಳು ತರ್ಕಶಾಸ್ತ್ರಾಭ್ಯಾಸಿಗಳಿಗೆ ರೂಢಿಗೆ ಬರಬೇಕಾಗಿವೆ. ಅವನ್ನು ರೂಢಿಗೆ ತಂದುಕೊಂಡ ಪ್ರತಿಭಾವಂತರಿಗೇನೂ ತರ್ಕಶಾಸ್ತ್ರವು ಗಹನವಲ್ಲ. ಮತ್ತೆ ಮತ್ತೆ ಯತ್ನಮಾಡಿ ಅಭ್ಯಾಸಿಗಳು ಪಾರಿಭಾಷಿಕ ಪದಗಳನ್ನು ರೂಢಿಗೆ ತಂದುಕೊಳ್ಳದಿದ್ದರೆ ತರ್ಕಶಾಸ್ತ್ರದ ಭಾಷಾಂತರಾನುವಾದ ಮತ್ತು ಮೂಲಗ್ರಂಥ ಇವುಗಳನ್ನು ಗಹನವೆಂದು ಹಳಿಯುವಂತಾಗುವುದು. ಆ ಸನ್ನಿವೇಶವು ಒದಗದಿರಲೆಂದು ನನ್ನ ಆಕಾಂಕ್ಷೆ,

ಪ್ರಕೃತ ಬಾಲಕರಿಗೆ ವ್ಯುತ್ಪತ್ತಿಯಾಗಲೆಂದು ನ್ಯಾಯ–ವೈಶೇಷಿಕ ಶಾಸ್ತ್ರಗಳ ಸಿದ್ಧಾಂತಗಳನ್ನು ಸಂಗ್ರಹಿಸಲು ಹೊರಟ 'ಅನ್ನಂಭಟ್ಟ' ಎಂಬ ಗ್ರಂಥಕಾರನಿಂದ ರಚಿಸಲ್ಪಟ್ಟ 'ತರ್ಕಸಂಗ್ರಹ' ಗ್ರಂಥವನ್ನು ವಿದ್ವಾನ್ ಜಿ. ವಿಷ್ಣುಮೂರ್ತಿಭಟ್ಟರು ಕನ್ನಡ ಭಾಷೆಗೆ ತಂದಿರುತ್ತಾರೆ. ಇವರು ತರ್ಕಸಂಗ್ರಹಕ್ಕೆ ಅವಶ್ಯವಾದ ಒಂದು ಸುಲಭವಾದ ವ್ಯಾಖ್ಯಾನವನ್ನೇ ಕನ್ನಡದಲ್ಲಿ ಬರೆದಿದ್ದಾರೆ.

ಇದರ ಸರಣಿಯು ಇವರಲ್ಲಿರುವ ಉಭಯ ಭಾಷಾಪಾಂಡಿತ್ಯ ಮತ್ತು ವಿಶೇಷವಾದ ಶಾಸ್ತ್ರಪರಿಶ್ರಮ ಇವುಗಳನ್ನು ಬೆಳಗುತ್ತದೆ. ಮತ್ತು ಕನ್ನಡಿಗರು ತರ್ಕಶಾಸ್ತ್ರ ವಿಷಯಗಳನ್ನು ತಿಳಿಯುವಂತಾಗಲೆಂಬ ಹೆಬ್ಬಯಕೆಯನ್ನು ಪ್ರಕಾಶಗೊಳಿಸುತ್ತದೆ.

ಈ ಗ್ರಂಥವನ್ನು ಆಮೂಲಾಗ್ರವಾಗಿ ನೋಡಿ ಸಂತೋಷಿಸಿದ ನಾನು ಕನ್ನಡಿಗರು ಇದರ ಸಂಪೂರ್ಣ ಪ್ರಯೋಜನವನ್ನು ಹೊಂದಲೆಂದೂ ಅವರ ಸಹಕಾರದಿಂದ ವಿಶೇಷ ಉತ್ತೇಜನವನ್ನು ಹೊಂದಿದ ಈ ಗ್ರಂಥಕಾರರಿಂದ ಇಂತಹ ಗ್ರಂಥಗಳ ಪ್ರಕಾಶನವು ಮುಂದುವರಿಯಲೆಂದೂ ಹಾರೈಸುತ್ತೇನೆ.

ಮಹಾರಾಜಕಾಲೇಜ್,
ಮೈಸೂರು.

**ಪಿ. ಚಂದ್ರಶೇಖರಭಟ್ಟ.**
ಸಂಸ್ಕೃತ ಉಪನ್ಯಾಸಕ
ಮೈಸೂರು ವಿಶ್ವವಿದ್ಯಾನಿಲಯ

# ನಿವೇದನಮ್

"ಕಾಣಾದಂ ಪಾಣಿನೀಯಂ ಚ ಸರ್ವಶಾಸ್ತ್ರೋಪಕಾರಕಮ್" ನ್ಯಾಯ ಮತ್ತು ವ್ಯಾಕರಣ ಇವೆರಡೂ ಎಲ್ಲಾ ಶಾಸ್ತ್ರಗಳಿಗೂ ಸಹಾಯಕವಾಗಿವೆ ಎಂಬ ಸೂಕ್ತಿ ಹಿಂದಿನಿಂದಲೂ ಪ್ರಸಿದ್ಧವಾಗಿದೆ. ಕರ್ಣಾಟಕ ಬಂಧುಗಳಿಗೆ ಸಂಸ್ಕೃತಾಭ್ಯಾಸಕ್ಕೆ ತಕ್ಕಮಟ್ಟಿಗೆ ಸಹಾಯವಾಗಲೆಂದು ಸನ್ಮಿತ್ರರ ಉದಾರ ನೆರವಿನಿಂದಲೂ ಸಾಹಸದಿಂದಲೂ "ಪಾಣಿನೀಯ ಪ್ರವೇಶಿಕಾ" ಎಂಬ ವ್ಯಾಕರಣ ಗ್ರಂಥವು ಪ್ರಕಾಶಿತವಾದಮೇಲೆ ಈಗ ಸರ್ವಶಾಸ್ತ್ರೋಪಕಾರಕವಾದ ತರ್ಕಶಾಸ್ತ್ರದ ಪ್ರಥಮ ಪರಿಚಯವನ್ನು ಮಾಡಿಕೊಡಬೇಕೆಂಬ ಉತ್ಸಾಹದಿಂದ ಈ ಕನ್ನಡ ತರ್ಕಸಂಗ್ರಹವನ್ನು ಉಭಯಭಾಷಾಭ್ಯಾಸಿಗಳ ಮುಂದೆ ತಂದಿರುತ್ತೇನೆ. ತರ್ಕದಲ್ಲಿ ನ್ಯಾಯ ವೈಶೇಷಿಕಗಳೆಂಬ ಭೇದವಿದ್ದರೂ ಅನ್ನಂಭಟ್ಟರು ಈ ತರ್ಕಸಂಗ್ರಹದಲ್ಲಿ ಅವೆರಡರ ಸಾರವನ್ನೂ ಬೋಧಿಸಿರುತ್ತಾರೆ. ಇವರು ಹದಿನಾರನೇ ಶತಮಾನದ ಅಂತ್ಯದಲ್ಲಿ ಇದ್ದರೆಂದು ನಿಶ್ಚಿತವಾಗಿದೆ. ತರ್ಕಸಂಗ್ರಹಕ್ಕೆ ದೀಪಿಕೆಯೆಂಬ ವ್ಯಾಖ್ಯಾನವನ್ನೂ ಬರೆದು ಇವರು ಸಂಗ್ರಹವನ್ನು ವಿಸ್ತರಿಸಿರುತ್ತಾರೆ. ಅದನ್ನೂ ಕನ್ನಡದಲ್ಲಿ ಪ್ರಕಾಶಪಡಿಸಬೇಕೆಂಬ ಕುತೂಹಲವಿದ್ದರೂ ಹಣದ ಅಭಾವದಿಂದ ಮುಂದುವರಿಸಬೇಕಾಗಿದೆ. ತರ್ಕ ಸಂಗ್ರಹವನ್ನು ಶಾಬ್ದಬೋಧ ಕ್ರಮದಿಂದ ಓದಿದರೇ ಹೆಚ್ಚು ವ್ಯುತ್ಪತ್ತಿಯುಂಟಾಗುವುದಾದರೂ ಕನ್ನಡಿಗರಿಗೆ ತರ್ಕಶಾಸ್ತ್ರದ ಪರಿಚಯಕ್ಕೋಸ್ಕರವೇ ನ್ಯಾಯಬೋಧಿನೀ ವ್ಯಾಖ್ಯಾನದ ಆಧಾರದಮೇಲೆ ಸಾಧಾರಣರೀತಿಯಿಂದ ಇದಕ್ಕೆ ವ್ಯಾಖ್ಯಾನವನ್ನು ರಚಿಸಿರುತ್ತೇನೆ. ತರ್ಕಶಾಸ್ತ್ರದಲ್ಲಿ ಪಾರಿಭಾಷಿಕಪದಗಳು ಇತರ ಶಾಸ್ತ್ರಕ್ಕಿಂತ ಅಧಿಕವಾಗಿವೆ. ಅವುಗಳಲ್ಲಿ ಅವಚ್ಛೇದಕಾದಿ ಕೆಲವು ಶಬ್ದಗಳನ್ನು ಇನ್ನೊಂದು ರೀತಿಯಿಂದ ಹೇಳಲು ಸಾಧ್ಯವೇ ಇಲ್ಲ. ಶಾಸ್ತ್ರಮರ್ಯಾದೆಯಿಂದಲೇ ಪುನಃ ಪುನಃ ಬರುತ್ತಿರುವುದರಿಂದ ಮನಸ್ಸಿನಲ್ಲಿಯೇ ಅದರ ಸ್ವರೂಪವನ್ನು ತಿಳಿದುಕೊಳ್ಳಬೇಕಾಗುತ್ತದೆ. ತರ್ಕಪಾರಿಭಾಷಿಕ ಪದಗಳು ಕ್ಲಿಷ್ಟವಾಗಿವೆಯೆಂದು ಸಾಧ್ಯವಾದಷ್ಟು ಪದಗಳನ್ನು ಆರಿಸಿ ಅವುಗಳಿಗೆ ಸರಳವಾದ ಕನ್ನಡದಲ್ಲಿ ಅರ್ಥವನ್ನು ವಿವರಿಸಿ ಕೋರ

ಕೊಟ್ಟಿರುತ್ತೇನೆ. ಅವುಗಳನ್ನು ಚೆನ್ನಾಗಿ ತಿಳಿದು ಲಕ್ಷಣ ಸಮನ್ವಯ ಮಾಡುವಾಗ ಅರ್ಥಪೂರ್ವಕವಾಗಿ ಪುನಃ ಪುನಃ ಹೇಳುತ್ತಾ ಬಂದರೆ ಆ ಪದಾರ್ಥಗಳ ಜ್ಞಾನವು ಸ್ಪಷ್ಟವಾಗುತ್ತದೆ. ಅನುಮಾನ ಪ್ರಯೋಗಾದಿ ಗಳನ್ನು ಕನ್ನಡದಲ್ಲಿ ಪರಿವರ್ತಿಸಿ ಹೇಳಿದರೆ ಭಾಷಾಮರ್ಯಾದೆಯಿಂದ ಅದು ಭಿನ್ನಾರ್ಥದಂತೆ ತೋರುತ್ತದೆ. ಆದುದರಿಂದ ಮೂಲ ಭಾಷೆಯಲ್ಲಿಯೇ ಅದನ್ನು ತಿಳಿದು ಅಭ್ಯಾಸಿಸಿದರೆ ಮುಂದಿನ ಶಾಸ್ತ್ರಗ್ರಂಥಗಳನ್ನು ಸುಲಭ ವಾಗಿ ತಿಳಿಯಬಹುದು.

ನನ್ನ ಪೂಜ್ಯಗುರುವರರಾದ ಬ್ರಂ. ಶ್ರೀ ವಿದ್ವಾನ್ ಪಾಟಣಕರ ಚಂದ್ರ ಶೇಖರ ಭಟ್ಟರನ್ನು ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದು ಕೊಡ ಬೇಕೆಂದು ಪ್ರಾರ್ಥಿಸಿದೊಡನೆಯೇ ಅವರು ಅವ್ಯಾಜಕೃಪೆಯಿಂದ ಒಪ್ಪಿ ಬರೆದುಕೊಟ್ಟು ಈ ಗ್ರಂಥಕ್ಕೆ ಒಂದು ಪ್ರಾಶಸ್ತ್ಯ ತಂದುಕೊಟ್ಟಿರುತ್ತಾರೆ. ಇವರಿಗೆ ಹಾರ್ದಿಕ ವಂದನೆಗಳನ್ನು ಅರ್ಪಿಸುವುದಲ್ಲದೆ ತುಂಬಾ ಕೃತಜ್ಞ ನಾಗಿರುತ್ತೇನೆ. ಅವರ ಈ ಘನವಾದ ಮುನ್ನುಡಿಯಿಂದ ಈ ಗ್ರಂಥವು ಸರ್ವತೋಮುಖವಾಗಿ ಜನಪ್ರಿಯವಾಗಲೆಂದು ಕನ್ನಡ ಮಾತೆಯನ್ನು ಪ್ರಾರ್ಥಿ ಸುತ್ತೇನೆ. ಪಾರಿಭಾಷಿಕ ಪದಗಳಿಗೆ ಆಂಗ್ಲಭಾಷಾಪರ್ಯಾಯವಾಚಿ ಶಬ್ದಗಳನ್ನು ಒದಗಿಸಿಕೊಟ್ಟ ಮಹಾರಾಣಿ ಕಾಲೇಜ್ ಲಾಜಿಕ್ ಲೆಕ್ಚರರಾದ ಶ್ರೀ. ಎಂ. ಎನ್. ನರಸಿಂಹನ್ ಅವರಿಗೆ ಕೃತಜ್ಞನಾಗಿರುತ್ತೇನೆ. ಇದರಿಂದ ಆಂಗ್ಲಭಾಷಾ ವಿದ್ಯಾರ್ಥಿಗಳಿಗೂ ಉಪಕಾರವಾಗುವುದೆಂದು ನಂಬಿರುತ್ತೇನೆ. ಈ ಗ್ರಂಥಪ್ರಕಾಶಕ್ಕೆ ನೆರವಾದ ಮಹಾರಾಣಿ ಕಾಲೇಜ್ ಹಿಂದೀ ಅಧ್ಯಾಪಕ ರಾದ ಶ್ರೀಮಾನ್ ಮಾ॥ ದೇವೇಗೌಡರಿಗೂ, ಮುದ್ರಣವನ್ನು ಅಂದವಾಗಿ ಮಾಡಿಕೊಟ್ಟಿರುವ ಶ್ರೀ॥ ಆರ್. ಕೃಷ್ಣಶೆಟ್ಟರಿಗೂ ಕೃತಜ್ಞನಾಗಿರುತ್ತೇನೆ. ಈ ಗ್ರಂಥದಿಂದ ಶಾಸ್ತ್ರಜಿಜ್ಞಾಸುಗಳಾದ ಕನ್ನಡ ಬಂಧುಗಳೆಲ್ಲರೂ ತರ್ಕ ಶಾಸ್ತ್ರದ ಪ್ರಥಮ ಪರಿಚಯವನ್ನು ಹೊಂದಿ ಉತ್ತರೋತ್ತರ ತತ್ತ್ವಜ್ಞಾನ ವನ್ನು ಪಡೆದು ಭಾರತದ ಸಂಸ್ಕೃತಿಯನ್ನು ಬೆಳಗಲೆಂದು ಹಾರೈಸುತ್ತೇನೆ.

9 – 2—58 ಸಜ್ಜನ ವಿಧೇಯ

ಮೈಸೂರು **ಜಿ. ವಿಷ್ಣುಮೂರ್ತಿ ಭಟ್ಟ**

# ವಿಷಯಾನುಕ್ರಮಣಿಕಾ

|| ಶ್ರೀಃ ||

# ತರ್ಕಸಂಗ್ರಹಃ

**ನಿಧಾಯ ಹೃದಿ ವಿಶ್ವೇಶಂ ವಿಧಾಯ ಗುರುವಂದನಮ್ ।**
**ಬಾಲಾನಾಂ ಸುಖಬೋಧಾಯ ಕ್ರಿಯತೇ ತರ್ಕಸಂಗ್ರಹಃ ॥**

ಅನ್ನಂಭಟ್ಟನು ತಾನು ಮಾಡಲು ಬಯಸಿರುವ ಗ್ರಂಥವು ನಿರ್ವಿಘ್ನವಾಗಿ ಸಮಾಪ್ತಿ ಹೊಂದಲೆಂದು ಇಷ್ಟದೇವತಾ ನಮಸ್ಕಾರರೂಪ ಮಂಗಲವನ್ನು ಮಾಡುತ್ತಾನೆ. ಹೃದಯದಲ್ಲಿ ಶಿವನನ್ನು ಧರಿಸಿ (ಚನ್ನಾಗಿ ಧ್ಯಾನಿಸಿ) ಗುರುವಂದನೆ ಮಾಡಿ, ಬಾಲಕರು (ಅನಾಯಾಸದಿಂದ) ಸುಖವಾಗಿ ತಿಳಿಯಲು ತರ್ಕ ಸಂಗ್ರಹವು (ಅನ್ನಂಭಟ್ಟನಿಂದ) ಮಾಡಲ್ಪಡುತ್ತದೆ. ವ್ಯಾಕರಣಾದಿ ಶಾಸ್ತ್ರ ತಿಳಿದವರಾದರೂ ತರ್ಕಶಾಸ್ತ್ರ ತಿಳಿಯದವರು ಇಲ್ಲಿ ಬಾಲರು. ತರ್ಕ ಸಂಗ್ರಹವೇ ಇಲ್ಲಿ ವಿಷಯ. ತರ್ಕ್ಯಂತೇ= ಪ್ರತಿಪಾದ್ಯಂತೇ ಇತಿ ತರ್ಕಾಃ. ಪದಾರ್ಥಗಳು. ಅವುಗಳ ಸಂಗ್ರಹ ಎಂದರೆ ಸಂಕ್ಷೇಪದಿಂದ ಸ್ವರೂಪ ವಿವರಣೆ. ಅವುಗಳಿಂದ ಅನಾಯಾಸವಾದ ಪದಾರ್ಥಬೋಧವೇ ಪ್ರಯೋಜನ. ಇವುಗಳಿಗೆ ಪ್ರತಿಪಾದ್ಯಪ್ರತಿಪಾದಕಾದಿ ಸಂಬಂಧಗಳನ್ನು ಊಹಿಸಿ ತಿಳಿಯಬೇಕು.

**ದ್ರವ್ಯಗುಣಕರ್ಮ ಸಾಮಾನ್ಯ ವಿಶೇಷ ಸಮವಾಯಾಭಾವಾಃ ಸಪ್ತಪದಾರ್ಥಾಃ ॥**

ಪದಾರ್ಥಗಳನ್ನು ವಿಭಾಗಿಸುತ್ತಾನೆ--ದ್ರವ್ಯೇತಿ. ॥ ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವ ಎಂದು ಪದಾರ್ಥಗಳು ಏಳುರೀತಿಯಾಗಿವೆ. ದ್ರವ್ಯತ್ವಾದಿಗಳು ಏಳು ಪದಾರ್ಥವಿಭಾಜಕ ಧರ್ಮಗಳು. ಇವುಗಳಲ್ಲಿ ಅನ್ಯತಮ= ಯಾವುದಾದರೊಂದರಿಂದ ಕೂಡಿರುವುದು ಪದಾರ್ಥ. ದ್ರವ್ಯಾದಿಗಳು ಏಳು ಎಂದು ತಿಳಿದಿರುವಾಗ ಪುನಃ ಏಳು ಎಂದುದಕ್ಕೆ ಪ್ರಯೋಜನವಿದೆ. ಎಲ್ಲೆಲ್ಲಿ ಪದಾರ್ಥತ್ವ ಇದೆಯೋ ಅಲ್ಲಿ ದ್ರವ್ಯಾದಿಸಪ್ತಾನ್ಯತಮತ್ವ ಇದೆ ಎಂದು ವ್ಯಾಪ್ತಿ ಸೂಚಿಸಲು ಸಪ್ತ ಎಂದಿದೆ. ಪದಾರ್ಥತ್ವ ದ್ರವ್ಯದಲ್ಲಿ ಇದೆ

ಯೆಂದರೆ ಅಲ್ಲಿ ದ್ರವ್ಯಾದಿಸಪ್ತ ಅನ್ಯತಮತ್ವ ಇದ್ದೇ ಇರುತ್ತದೆ. ಪದಾರ್ಥತ್ವವು ವ್ಯಾಪ್ಯ. ದ್ರವ್ಯಾದಿ ಸಪ್ತಾನ್ಯತಮತ್ವವು ವ್ಯಾಪಕ. ವ್ಯಾಪ್ಯ ಇದ್ದಲ್ಲಿ ವ್ಯಾಪಕ ಇದ್ದೇ ಇರುತ್ತದೆ.

ಮೀಮಾಂಸಕರು ಶಕ್ತಿ ಎಂಬ ಎಂಟನೆಯ ಪದಾರ್ಥವನ್ನು ಅಂಗೀಕರಿಸುವಾಗ ಏಳೇ ಎಂದು ಹೇಳಿದುದು ಹೇಗೆ? ಕಟ್ಟಿಗೆಯಲ್ಲಿ ಬೆಂಕಿ ಉರಿಯುತ್ತಿರುವಾಗ ಒಂದು ಮಣಿಯನ್ನಿಟ್ಟರೆ ಅಗ ಸುಡುವುದಿಲ್ಲ. ಮಣಿ ಇಲ್ಲದಿದ್ದರೆ ಆಗ ಬೆಂಕಿ ಸುಡುತ್ತದೆ. ಆದುದರಿಂದ ಮಣಿ ಇರುವಾಗ ಬೆಂಕಿಯಲ್ಲಿ ಒಂದುಶಕ್ತಿ ನಾಶವಾಗುವುದೆಂದೂ, ಮಣಿ ಇಲ್ಲದಿರುವಾಗ ಸುಡತಕ್ಕ ಒಂದುಶಕ್ತಿ ಹುಟ್ಟುತ್ತದೆಂದೂ ಕಲ್ಪಿಸಬೇಕು. ಇದರಿಂದ ಶಕ್ತಿಯೆಂಬ ಅತಿರಿಕ್ತ ಪದಾರ್ಥ ಇದೆಯೆಂದು ಒಪ್ಪಲೇಬೇಕು ಎಂದು ಅವರ ಮತ. ತಾರ್ಕಿಕರು ಇದನ್ನು ಒಪ್ಪುವುದಿಲ್ಲ. ಮಣಿ ದಾಹಕ್ಕೆ ಪ್ರತಿಬಂಧಕ. ಪ್ರತಿಬಂಧಕದ ಅಭಾವವು ಕಾರ್ಯಸಾಮಾನ್ಯವನ್ನು ಕುರಿತು ಕಾರಣ. ಆಗ ದಾಹರೂಪ ಕಾರ್ಯಕ್ಕೆ ಮಣ್ಯಭಾವ= ಮಣಿ ಇಲ್ಲದಿರುವುದು ಕಾರಣವಾಯಿತು. ಆಗ ನಾವು ಹೇಳಿದ ಪದಾರ್ಥಕ್ಕಿಂತ ಬೇರೆ ಯಾವುದಿದೆ? ಶಕ್ತಿ ಕಲ್ಪನೆಮಾಡುವುದಾದರೆ ಅನಂತಶಕ್ತಿ, ಉತ್ಪತ್ತಿ, ನಾಶ, ಅದರ ಪ್ರಾಗಭಾವ ಇತ್ಯಾದಿಗಳನ್ನೂ ಕಲ್ಪಿಸಬೇಕಾದುದರಿಂದ ಗೌರವ ಬರುತ್ತೆ. ಆದುದರಿಂದ ಏಳೇ ಪದಾರ್ಥಗಳು. ಪದಸ್ಯ ಅರ್ಥಃ ಪದಾರ್ಥಃ ಎಂಬುದರಿಂದ ಅಭಿಧೇಯತ್ವವನ್ನು ಪದಾರ್ಥದ ಸಾಮಾನ್ಯ ಲಕ್ಷಣವೆಂದು ಹೇಳಿ ಆಮೇಲೆ ವಿಭಾಗ ಮಾಡಬೇಕು.

**ತತ್ರ ದ್ರವ್ಯಾಣಿ ಪೃಥಿವ್ಯಪ್ತೇಜೋವಾಯ್ವಾಕಾಶಕಾಲದಿಗಾತ್ಮಮನಾಂಸಿ ನವೈವ ॥**

ಏಳು ಪದಾರ್ಥಗಳ ಮಧ್ಯದಲ್ಲಿ ದ್ರವ್ಯ ವೆಂಬ ಪದಾರ್ಥವು ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶ, ಕಾಲ, ದಿಕ್, ಆತ್ಮಾ, ಮನಸ್ಸು ಎಂದು ಒಂಬತ್ತೇ ಆಗಿರುತ್ತದೆ. ಕತ್ತಲೆಯೆಂಬ ಹತ್ತನೆ ಪದಾರ್ಥ ಇರುವಾಗ ಹೇಗೆ ಒಂಬತ್ತೇ ದ್ರವ್ಯವೆಂದು ಹೇಳುವುದು. ? 'ಕಪ್ಪಾದ ಕತ್ತಲೆಯು ಚಲಿಸುತ್ತದೆ' ಎಂಬ ಪ್ರತ್ಯಕ್ಷವೇ ಇದು ಇವೆಯೆಂಬುದರಲ್ಲಿ ಪ್ರಮಾಣ. ಗುಣಕ್ರಿಯೆಗಳಿಗೆ

ಆಶ್ರಯವಾದದ್ದೇ ದ್ರವ್ಯವಾಗುವುದರಿಂದ ಕತ್ತಲೆಯು ನೀಲರೂಪ ಗುಣಕ್ಕೂ ಚಲನರೂಪ ಕ್ರಿಯೆಗೂ ಆಶ್ರಯವಾದುದರಿಂದ ದ್ರವ್ಯವಾಗುತ್ತದೆ. ಇದು ಹಿಂದೆ ಹೇಳಿದ ಯಾವ ದ್ರವ್ಯಗಳಲ್ಲಿಯೂ, ಸೇರುವುದಿಲ್ಲ. ಗಂಧವಿಲ್ಲದಿರುವುದರಿಂದ ಪೃಥವೀ ಆಗುವುದಿಲ್ಲ. ಶೀತ ಉಷ್ಣ ಸ್ಪರ್ಶಗುಣಗಳಿಲ್ಲದಿರುವುದರಿಂದ ಜಲ ತೇಜಸ್ಸುಗಳಲ್ಲಿ ಸೇರುವುದಿಲ್ಲ. ನೀಲರೂಪವಿರುವುದರಿಂದ ವಾಯು, ಆಕಾಶ, ಕಾಲ, ದಿಗ್, ಆತ್ಮ ಮನಸ್ಸುಗಳಲ್ಲಿಯೂ ಸೇರುವುದಿಲ್ಲ. ಅವು ಆರೂ ನೀರೂಪ (ರೂಪವಿಲ್ಲದ) ದ್ರವ್ಯಗಳು. ಆದುದರಿಂದ ಇದು ಹತ್ತನೆಯ ದ್ರವ್ಯವಾಗುತ್ತದೆ ಎಂದು ಕೆಲವರ ಮತ. ಆದರೆ ತೇಜಸ್ಸಿನ ಅಭಾವವೇ ಕತ್ತಲೆಯೆಂದು ಸ್ವೀಕರಿಸಿದರೆ ಯಾವ ಬಾಧಕವೂ ಇಲ್ಲದಿರುವುದರಿಂದ ಇದೊಂದು ಬೇರೆ ಪದಾರ್ಥ ಎಂಬುದರಲ್ಲಿ ಪ್ರಮಾಣವಿಲ್ಲ. ಕತ್ತಲೆಯೇ ಒಂದು ದ್ರವ್ಯವಾಗಲಿ ; ತೇಜಸ್ಸು ತಮಸ್ಸಿನ ಅಭಾವ ರೂಪವಾಗಲಿ ಎಂದು ಹೇಳಬಾರದು. ತೇಜಸ್ಸು ಅಭಾವರೂಪ ಪದಾರ್ಥವಾದರೆ ಉಷ್ಣಸ್ಪರ್ಶ ರೂಪಗುಣಕ್ಕೆ ಆಶ್ರಯವಾಗಿ ಇನ್ನೊಂದು ಕಲ್ಪಿಸಬೇಕಾಗುತ್ತದೆ. ಆಗ ಮತ್ತೂ ಗೌರವ ದೋಷ ಬರುತ್ತದೆ. ಉಷ್ಣಸ್ಪರ್ಶಕ್ಕೆ ಆಶ್ರಯವಾಗಿ ತೇಜಸ್ಸು ಇದೆಯೆಂದು ಸರ್ವರೂ ತಿಳಿದುದರಿಂದ ಅದೇ ದ್ರವ್ಯವೆಂದೂ ತಮಸ್ಸು ಅದರ ಅಭಾವವೆಂದೂ ಕಲ್ಪಿಸಬೇಕು. ಕತ್ತಲೆಯಲ್ಲಿ ನೀಲಗುಣವಿದೆಯೆಂಬುದು (ಆಕಾಶ ನೀಲವೆಂದು ತೋರಿದಂತೆ.) ಭ್ರಾಂತಿ. ದೀಪದ ಚಲನಕ್ರಿಯೆ ಅಲ್ಲಿ ಆರೋಪಿತವಾಗಿದೆ. ದೀಪ ಚಲಿಸಿದರೆ ಕತ್ತಲೆಯೂ ಚಲಿಸುತ್ತದೆಯೆಂದು ಭ್ರಾಂತಿಯಿಂದ ತಿಳಿಯುತ್ತಾರೆ. ಆದುದರಿಂದ ಒಂಭತ್ತೇ ಪದಾರ್ಥಗಳು.

**ರೂಪರಸಗಂಧಸ್ಪರ್ಶಸಂಖ್ಯಾ ಪರಿಮಾಣ ಪೃಥಕ್ತ್ವ ಸಂಯೋಗ ವಿಭಾಗ ಪರತ್ವಾಪರತ್ವ ಗುರುತ್ವದ್ರವತ್ವ ಸ್ನೇಹ ಶಬ್ದ ಬುದ್ಧಿ ಸುಖ ದುಃಖೇಚ್ಛಾ ದ್ವೇಷ ಪ್ರಯತ್ನ ಧರ್ಮಾಧರ್ಮ ಸಂಸ್ಕಾರಾಶ್ಚತುರ್ವಿಂಶತಿರ್ಗುಣಾಃ ॥ ಉತ್ಕ್ಷೇಪಣಾಪಕ್ಷೇಪಣಾಕುಂಚನ ಪ್ರಸಾರಣ ಗಮನಾನಿ ಪಂಚ ಕರ್ಮಾಣಿ ॥ ಪರಮಪರಂ ಚೇತಿ ದ್ವಿವಿಧಂ ಸಾಮಾನ್ಯಮ್ ॥ ನಿತ್ಯದ್ರವ್ಯವೃತ್ತಯೋ ವಿಶೇಷಾಸ್ತ್ವನಂತಾ ಏವ । ಸಮವಾಯಸ್ತ್ವೇಕ ಏವ । ಅಭಾವಶ್ಚತುರ್ವಿಧಃ ಪ್ರಾಗಭಾವಃ ಪ್ರಧ್ವಂಸಾಭಾವೋಽತ್ಯಂತಾಭಾವೋಽನ್ಯೋನ್ಯಾಭಾವಶ್ಚೇತಿ ॥**

ರೂಪ, ರಸ, ಗಂಧ, ಸ್ಪರ್ಶ, ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ, ಪರತ್ವ, ಅಪರತ್ವ, ಗುರುತ್ವ, ದ್ರವತ್ವ, ಸ್ನೇಹ, ಶಬ್ದ, ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರಗಳೆಂದು ಗುಣಗಳು ಇಪ್ಪತ್ತನಾಲ್ಕು.

ಉತ್‌ಕ್ಷೇಪಣ, ಅಪಕ್ಷೇಪಣ, ಆಕುಂಚನ, ಪ್ರಸಾರಣ ಗಮನ ಎಂದು ಕರ್ಮ ಐದುವಿಧ.

ಸಾಮಾನ್ಯವು ಪರ, ಅಪರ ಎಂದು ಎರಡು ರೀತಿಯಾಗಿದೆ.

ನಿತ್ಯದ್ರವ್ಯಗಳನ್ನು ಆಶ್ರಯಿಸಿರುವ ವಿಶೇಷಗಳಾದರೋ ಅನಂತ (ಅಸಂಖ್ಯಾತ) ಗಳಾಗಿವೆ.

ಸಮವಾಯವು ಒಂದೇ ಆಗಿದೆ.

ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವ, ಅನ್ಯೋನ್ಯಾಭಾವ ಗಳೆಂದು ಅಭಾವಗಳು ನಾಲ್ಕುವಿಧಗಳಾಗಿವೆ. ಹೀಗೆ ಮೊದಲು ದ್ರವ್ಯಾದಿಗಳ ವಿಭಾಗವನ್ನು ತೋರಿಸಿ ಅವುಗಳ ಲಕ್ಷಣಗಳನ್ನು ಮುಂದೆ ಕ್ರಮವಾಗಿ ಹೇಳುತ್ತಾನೆ. ಈಗ ಕ್ರಮದಿಂದ ಪ್ರಾಪ್ತವಾದ ಪೃಥಿವಿಯ ಲಕ್ಷಣವನ್ನು ಹೇಳುತ್ತಾನೆ.

**ತತ್ರ ಗಂಧವತೀ ಪೃಥಿವೀ । ಸಾ ದ್ವಿವಿಧಾ ನಿತ್ಯಾಽನಿತ್ಯಾ ಚ । ನಿತ್ಯಾಪರಮಾಣುರೂಪಾ । ಅನಿತ್ಯಾ ಕಾರ್ಯರೂಪಾ । ಪುನಸ್ತ್ರಿವಿಧಾ । ಶರೀರೇಂದ್ರಿಯವಿಷಯಭೇದಾತ್ । ಶರೀರಮಸ್ಮದಾದೀನಾಮ್ । ಇಂದ್ರಿಯಂ ಗಂಧಗ್ರಾಹಕಂ ಘ್ರಾಣಂ ನಾಸಾಗ್ರವರ್ತಿ । ವಿಷಯೋ ಮೃತ್‌ಪಾಷಾಣಾದಿಃ ॥**

ದ್ರವ್ಯದ ಪೃಥಿವ್ಯಾದಿ ಭೇದಗಳಲ್ಲಿ ಪೃಥಿವಿಯು ಗಂಧವುಳ್ಳದ್ದು. ಗಂಧಃ ಅಸ್ಯಾಃ ಅಸ್ತಿ ಇತಿ ಗಂಧವತೀ. ಗಂಧವತ್ತ್ವಂ (ಗಂಧ) ಪೃಥಿವಿಯ ಲಕ್ಷಣ. ಗಂಧವುಳ್ಳದ್ದು ಪೃಥಿವೀ. ಇಲ್ಲಿ ಲಕ್ಷ್ಯವು ಪೃಥಿವೀ. (ಲಕ್ಷಣಾಶ್ರಯ) ಲಕ್ಷ್ಯತಾ ಪೃಥಿವಿಯಲ್ಲಿದೆ. (ಲಕ್ಷ್ಯಸಾಮಾನ್ಯ ಧರ್ಮ) ಲಕ್ಷ್ಯತಾವಚ್ಛೇದಕವು ಪೃಥಿವೀತ್ವ. (ವ್ಯಾವರ್ತಕ ಧರ್ಮ) 'ಯದ್ಧರ್ಮಾವ

ಚ್ಛಿನ್ನಂ ಲಕ್ಷ್ಯಂ ಸಧರ್ಮೋ ಲಕ್ಷ್ಯತಾವಚ್ಛೇದಕಃ' ಲಕ್ಷ್ಯವು ಯಾವ ಧರ್ಮದಿಂದ ಕೂಡಿರುವುದೋ ಆ ಧರ್ಮವು ಲಕ್ಷ್ಯತಾವಚ್ಛೇದಕವಾಗುತ್ತದೆ. ಇಲ್ಲಿ ಲಕ್ಷ್ಯವಾದ ಪೃಥಿವಿಯು ಪೃಥಿವೀತ್ವಧರ್ಮದಿಂದ ಕೂಡಿರುವುದರಿಂದ ಪೃಥಿವೀತ್ವವು ಲಕ್ಷ್ಯತಾವಚ್ಛೇದಕವಾಗುತ್ತದೆ. ಅವಚ್ಛೇದಕದಿಂದ ಕೂಡಿರುವುದು ಅವಚ್ಛಿನ್ನ. ಪೃಥಿವಿಯಲ್ಲಿರುವ ಲಕ್ಷ್ಯತಾ ಪೃಥಿವೀತ್ವಾವಚ್ಛಿನ್ನವಾಗುತ್ತದೆ. ಇನ್ನುಮುಂದೆ ಶೀತಸ್ಪರ್ಶವತ್ತ್ವಂ ಜಲಸ್ಯಲಕ್ಷಣಂಎಂಬಿವೇಮುಂತಾದ ಸ್ಥಳಗಳಲ್ಲಿ ಲಕ್ಷ್ಯ ಲಕ್ಷತಾದಿಗಳನ್ನು ಊಹಿಸಿ ತಿಳಿಯಬೇಕು. ಗಂಧವುಳ್ಳ ಪೃಥಿವಿಯು ನಿತ್ಯ ಅನಿತ್ಯವೆಂದು ಎರಡು ವಿಧವಾಗಿದೆ. ಪರಮಾಣುರೂಪವಾದದ್ದು ನಿತ್ಯ. ಘಟಪಟಾದಿಕಾರ್ಯ ರೂಪವಾದದ್ದು ಅನಿತ್ಯ. ಇನ್ನೊಂದು ರೀತಿಯಿಂದ ಇದು ಶರೀರ, ಇಂದ್ರಿಯ, ವಿಷಯರೂಪ ಭೇದದಿಂದ ಮೂರು ವಿಧವಾಗುತ್ತದೆ. ಗಂಧವುಳ್ಳ ಶರೀರವೇ ಪಾರ್ಥಿವ ಶರೀರ. ನಮ್ಮ ಶರೀರದಂತಿರುವವುಗಳೆಲ್ಲಾ ಪಾರ್ಥಿವ ಶರೀರಗಳು ಆಗುತ್ತವೆ. ಗಂಧವುಳ್ಳ ಇಂದ್ರಿಯವೇ ಪಾರ್ಥಿವೇಂದ್ರಿಯ. ಅದಕ್ಕೆ ಘ್ರಾಣ (ಮೂಗು) ವೆಂದು ಹೆಸರು. ಅದು ಗಂಧವನ್ನು ಗ್ರಹಿಸುತ್ತದೆ. ಗಂಧದ ಪ್ರತ್ಯಕ್ಷವನ್ನುಂಟುಮಾಡುವುದು ಅದರ ಲಕ್ಷಣ. ಮೂಗಿನ ತುದಿಯಲ್ಲಿ ಅದುಇದೆ. ಗಂಧವುಳ್ಳ ವಿಷಯವೇ ಪಾರ್ಥಿವ ವಿಷಯ. ಅದು ಮಣ್ಣು ಕಲ್ಲು ಮುಂತಾದವುಗಳಾಗುತ್ತದೆ.

**ಶೀತಸ್ಪರ್ಶವತ್ಯ ಆಪಃ । ತಾ ದ್ವಿವಿಧಾಃ ನಿತ್ಯಾ ಅನಿತ್ಯಾಶ್ಚ । ನಿತ್ಯಾಃ ಪರಮಾಣುರೂಪಾಃ । ಅನಿತ್ಯಾಃ ಕಾರ್ಯರೂಪಾಃ । ಪುನಸ್ತ್ರಿವಿಧಾಃ ಶರೀರೇಂದ್ರಿಯವಿಷಯಭೇದಾತ್ । ಶರೀರಂ ವರುಣಲೋಕೇ । ಇಂದ್ರಿಯಂ ರಸಗ್ರಾಹಕಂ ರಸನಂ ಜಿಹ್ವಾಗ್ರವರ್ತಿ । ವಿಷಯಃ ಸರಿತ್ಸಮುದ್ರಾದಿಃ ॥**

ಆಪಃ ಶಬ್ದವು ನಿತ್ಯ ಸ್ತ್ರೀಲಿಂಗ ಬಹುವಚನ. ಆದುದರಿಂದ ಎಲ್ಲಾ ಬಹುವಚನಾಂತಗಳಾಗಿವೆ. ಶೀತಸ್ಪರ್ಶವುಳ್ಳದ್ದು ನೀರು. ವಿಭಾಗದ ರೀತಿ ಹಿಂದಿನಂತೆಯೇ ತಿಳಿಯಬೇಕು.

ನಾಲಿಗೆಯು ಜಲೀಯೇಂದ್ರಿಯ. ರಸವಿಷಯಕಪ್ರತ್ಯಕ್ಷ ಜನಕವಾದದ್ದು ಎಂದರ್ಥ. ರಸವನ್ನು ಗ್ರಹಿಸುವುದು (ರುಚಿನೋಡುವುದು) ಇದು ನಾಲಿಗೆಯ

ತುದಿಯಲ್ಲಿರುತ್ತದೆ. ಜಲದ ವಿಷಯವು ನದಿ ಸಮುದ್ರ ಮುಂತಾದವುಗಳು. ಕಲ್ಲು ಪೃಥಿವಿಯಾದರೂ ನೀರಿನ ಸಂಬಂಧದಿಂದ ತಣ್ಣಗಾಗಿದೆ.

**ಉಷ್ಣಸ್ಪರ್ಶವತ್ತೇಜಃ। ತಚ್ಚ ದ್ವಿವಿಧಮ್–ನಿತ್ಯಮನಿತ್ಯಂ ಚ। ನಿತ್ಯಂ ಪರಮಾಣು ರೂಪಮ್। ಅನಿತ್ಯಂ ಕಾರ್ಯರೂಪಮ್। ಪುನಸ್ತ್ರಿವಿಧಂ–ಶರೀರೇಂದ್ರಿಯವಿಷಯಭೇದಾತ್। ಶರೀರಮಾದಿತ್ಯಲೋಕೇ ಪ್ರಸಿದ್ಧಮ್। ಇಂದ್ರಿಯಂ ರೂಪಗ್ರಾಹಕಂ ಚಕ್ಷುಃ ಕೃಷ್ಣತಾರಾಗ್ರವರ್ತಿ। ವಿಷಯಶ್ಚತುರ್ವಿಧೋ ಭೌಮದಿವ್ಯೋದರ್ಯಾಕರಜಭೇದಾತ್। ಭೌಮಂ ವಹ್ನ್ಯಾದಿಕಮ್। ಅಬಿಂಧನಂ ದಿವ್ಯಂ ವಿದ್ಯುದಾದಿ। ಭುಕ್ತಸ್ಯ ಪರಿಣಾಮಹೇತುರುದರ್ಯಮ್। ಆಕರಜಂ ಸುವರ್ಣಾದಿ ॥**

ಉಷ್ಣಸ್ಪರ್ಶವು ತೇಜಸ್ಸಿನ ಲಕ್ಷಣ. ತೈಜಸಶರೀರವು ಸೂರ್ಯಲೋಕದಲ್ಲಿ ಪ್ರಸಿದ್ಧವಾಗಿದೆ. ತೈಜಸೇಂದ್ರಿಯವು ಕಣ್ಣು. ರೂಪವನ್ನು ಗ್ರಹಿಸುವುದು ಇದರ ಲಕ್ಷಣ. ರೂಪದ ಪ್ರತ್ಯಕ್ಷವನ್ನುಂಟುಮಾಡುತ್ತದೆ. ಇದು ಕಪ್ಪು ಗುಡ್ಡೆಯ ಮಧ್ಯದಲ್ಲಿರುತ್ತದೆ. ತೈಜಸ ವಿಷಯ ನಾಲ್ಕು ರೀತಿಯಾಗಿದೆ. ಬೆಂಕಿ ಮುಂತಾದವುಗಳು ಭೌಮವಿಷಯ. ಮಿಂಚು ಚಂದ್ರ ಸೂರ್ಯಾದಿಗಳು ದಿವ್ಯವಿಷಯ. ತಿನ್ನಲ್ಪಟ್ಟ ಅನ್ನ, ಕುಡಿಯಲ್ಪಟ್ಟ ನೀರು, ಮುಂತಾದವುಗಳು ಜೀರ್ಣವಾಗಲು ಕಾರಣವಾದದ್ದು ಔದರ್ಯ ವಿಷಯ. ಚಿನ್ನ ಮುಂತಾದವುಗಳು ಆಕರಜವಿಷಯ. ಪೀತ ಗುರುತ್ವಾದಿ ಗುಣಗಳಿರುವುದರಿಂದ ಚಿನ್ನವು ಪಾರ್ಥಿವವೆಂದು ಶಂಕೆ ಬರುತ್ತದೆ. ಆದರೆ, ಅಗ್ನಿಸಂಯೋಗವಿದ್ದರೆ ಪೃಥಿವಿಯ ದ್ರವತ್ವನಾಶವು ಲೋಕದಲ್ಲಿ ಪ್ರಸಿದ್ಧವಾಗಿದೆ. ಅತ್ಯಂತಾಗ್ನಿಸಂಯೋಗದಿಂದ ತುಪ್ಪದಲ್ಲಿರುವ ದ್ರವತ್ವನಾಶವಾಗುತ್ತದೆ. ಚಿನ್ನಕ್ಕಾದರೋ ಅತ್ಯಂತಾಗ್ನಿ ಸಂಬಂಧವಿದ್ದರೂ ಎಂದೂ ನಾಶವಾಗದೆ ದ್ರವತ್ವವೇ ಅದರಲ್ಲಿ ತೋರುವುದರಿಂದ ಪಾರ್ಥಿವವಾಗುವುದಿಲ್ಲ. ನೈಮಿತ್ತಿಕ ದ್ರವತ್ವವು ಅದರಲ್ಲಿ ಇರುವುದರಿಂದ ಜಲವಾಗುವುದಿಲ್ಲ. ರೂಪವಿರುವುದರಿಂದ ವಾಯು ಮುಂತಾದವುಗಳು ಆಗುವುದಿಲ್ಲ. ಆದುದರಿಂದ ಅದು ತೈಜಸವಾಗುತ್ತದೆ. ಪೃಥಿವಿಯ

ರೂಪ ಸ್ಪರ್ಶಸಂಬಂಧದಿಂದ ಅದರಲ್ಲಿರುವ ಉಷ್ಣಸ್ಪರ್ಶವೂ, ಭಾಸ್ವರಶುಕ್ಲ ವರ್ಣವೂ ತೋರುವುದಿಲ್ಲ.

**ರೂಪರಹಿತಃ ಸ್ಪರ್ಶವಾನ್ ವಾಯುಃ । ಸ ದ್ವಿವಿಧಃ ನಿತ್ಯೋಽನಿತ್ಯಶ್ಚ । ನಿತ್ಯಃ ಪರಮಾಣುರೂಪಃ । ಅನಿತ್ಯಃ ಕಾರ್ಯರೂಪಃ । ಪುನಸ್ತ್ರಿವಿಧಃ ಶರೀರೇಂದ್ರಿಯ ವಿಷಯಭೇದಾತ್ । ಶರೀರಂ ವಾಯುಲೋಕೇ । ಇಂದ್ರಿಯಂ ಸ್ಪರ್ಶಗ್ರಾಹಕಂ ತ್ವಕ್ ಸರ್ವಶರೀರವರ್ತಿ । ವಿಷಯೋ ವೃಕ್ಷಾದಿ ಕಂಪನಹೇತುಃ । ಶರೀರಾಂತಃ ಸಂಚಾರೀ ವಾಯುಃ ಪ್ರಾಣಃ । ಸ ಚೈಕೋಽಪ್ಯುಪಾಧಿಭೇದಾತ್ 'ಪ್ರಾಣಾಪಾನಾದಿ' ಸಂಜ್ಞಾಂ ಲಭತೇ ॥**

ಹೀಗೆ ಪೃಥಿವ್ಯಪ್‌ತೇಜಸ್ಸುಗಳ ಲಕ್ಷಣ ಹೇಳಿ ಈಗ ವಾಯು ನಿರೂಪಣೆ ಮಾಡುತ್ತಾನೆ. ರೂಪವಿಲ್ಲದೇ ಇದ್ದು ಸ್ಪರ್ಶ ಗುಣವುಳ್ಳದ್ದು ವಾಯು. 'ರೂಪರಹಿತತ್ವೇ ಸತಿ ಸ್ಪರ್ಶವತ್ತ್ವಂ' ವಾಯುಲಕ್ಷಣ. ಸತಿ ಸಪ್ತಮಿಗೆ ವೈಶಿಷ್ಟ್ಯಾರ್ಥವಿರುವುದರಿಂದ ರೂಪರಹಿತತ್ವವಿಶಿಷ್ಟಸ್ಪರ್ಶವತ್ತ್ವಂ ಎಂದು ಲಕ್ಷಣವಾಗುತ್ತದೆ. ಕೇವಲ ಸ್ಪರ್ಶವುಳ್ಳದ್ದು ಎಂದು ಲಕ್ಷಣ ಹೇಳಿದರೆ ಪೃಥಿವ್ಯಾದಿ ಮೂರರಲ್ಲಿ ಸ್ಪರ್ಶ ಇರುವುದರಿಂದ ಅತಿವ್ಯಾಪ್ತಿ ಬರುತ್ತದೆ. ಅದಕ್ಕೋಸ್ಕರ ರೂಪರಹಿತವಾಗಿರಬೇಕೆಂದು ವಿಶೇಷಣಾಂಶ ಹೇಳಿದೆ. ಕೇವಲ ರೂಪರಹಿತವಾಗಿರುವುದು ವಾಯುಲಕ್ಷಣವೆಂದರೆ ಆಕಾಶಾದಿಗಳಲ್ಲಿಯೂ ರೂಪ ಇಲ್ಲದಿರುವುದರಿಂದ ಅತಿವ್ಯಾಪ್ತಿ ಬರುತ್ತದೆ. ಆದುದರಿಂದ ವಿಶೇಷಣ ವಿಶೇಷ್ಯ ಎರಡೂ ಹೇಳಬೇಕು. ಆಗ ಪೃಥಿವ್ಯಾದಿಗಳಲ್ಲಿ ಸ್ಪರ್ಶವಿದ್ದರೂ ರೂಪರಹಿತವಾಗುವುದರಿಂದಲೂ, ಆಕಾಶಾದಿಗಳಲ್ಲಿ ರೂಪವಿಲ್ಲದಿದ್ದರೂ ಸ್ಪರ್ಶ ಇಲ್ಲದಿರುವುದರಿಂದ ಅಲ್ಲಿ ಲಕ್ಷಣ ಬರುವುದಿಲ್ಲ. ಲಕ್ಷಣವು ಯಾವಾಗಲೂ ಅತಿವ್ಯಾಪ್ತಿ, ಅವ್ಯಾಪ್ತಿ, ಅಸಂಭವವೆಂಬ ದೋಷತ್ರಯ ಶೂನ್ಯವಾಗಿರಬೇಕು. ಅಲಕ್ಷ್ಯದಲ್ಲಿಯೂ ಲಕ್ಷಣ ಬಂದರೆ ಅತಿವ್ಯಾಪ್ತವಾಗುತ್ತದೆ. ಕೊಂಬಿರುವುದು ಹಸು ಎಂದರೆ ಹಸುಗಳಲ್ಲಿ ಬರುವುದಲ್ಲದೆ ಅಲಕ್ಷ್ಯವಾದ ಎಮ್ಮೆ ಮುಂತಾದವುಗಳಲ್ಲಿಯೂ ಬರುವುದರಿಂದ ಅತಿವ್ಯಾಪ್ತವಾಗುತ್ತದೆ. ಒಂದು ಲಕ್ಷಣ ಲಕ್ಷ್ಯದ ಕೆಲವು ಕಡೆ ಮಾತ್ರ ಬಂದು ಕೆಲವು ಕಡೆ ಬಾರದಿ

ದ್ದರೆ ಆಗ ಅವ್ಯಾಪ್ತವಾಗುತ್ತದೆ. ನೀಲರೂಪ (ಕಪ್ಪು ಬಣ್ಣ) ವಿರುವುದೇ ಗೋವಿನ ಲಕ್ಷಣ, ಅಂದರೆ ಇಲ್ಲಿ ಅವ್ಯಾಪ್ತಿ ಬರುತ್ತದೆ. ನೀಲರೂಪ ಕೆಲವು ಗೋವುಗಳಲ್ಲಿ ಮಾತ್ರ ಇರಬಹುದು. ಗೋತ್ವಾಕ್ರಾಂತ (ಗೋತ್ವ ದಿಂದ ಕೂಡಿದ) ಬಿಳಿ ಗೋವುಗಳಲ್ಲಿ ಬಾರದಿರುವುದರಿಂದ ಅವ್ಯಾಪ್ತ ವಾಗುತ್ತದೆ. ಯಾವ ಲಕ್ಷ್ಯದಲ್ಲಿಯೂ ಲಕ್ಷಣ ಬಾರದಿರುವುದು ಅಸಂಭವ ಏಕಶಫ (ಗೊರಸು) ವಿರುವುದು ಗೋಲಕ್ಷಣವೆಂದರೆ ಗೋವುಗಳೆಲ್ಲ ದ್ವಿಶಫ ಗಳಾದುದರಿಂದ ಯಾವು ಗೋವುಗಳಲ್ಲಿಯೂ ಈ ಲಕ್ಷಣ ಬಾರದಿರುವುದ ರಿಂದ ಅಸಂಭವ ಬರುತ್ತದೆ. ಇವುಗಳಿಗೆ ಹೀಗೆ ಪರಿಷ್ಕೃತ ಲಕ್ಷಣ ಹೇಳುತ್ತಾರೆ.

'ಲಕ್ಷ್ಯತಾವಚ್ಛೇದಕಾವಚ್ಛಿನ್ನ ಪ್ರತಿಯೋಗಿತಾಕ ಭೇದಸಾಮಾನಾಧಿ ಕರಣ್ಯಂ' ಅತಿವ್ಯಾಪ್ತಿಃ. ಶೃಂಗಿತ್ವರೂಪ ಗೋಲಕ್ಷಣದಲ್ಲಿ ಇದು ಸಮನ್ವಿತ ವಾಗುತ್ತದೆ. ಲಕ್ಷ್ಯ= ಗೋವು, ಲಕ್ಷ್ಯತಾ= ಗೋವಿನಲ್ಲಿದೆ. ಲಕ್ಷ್ಯತಾವ ಚ್ಛೇದಕ =ಗೋತ್ವ. (ಲಕ್ಷ್ಯದಲ್ಲಿರುವ ವ್ಯಾವರ್ತಕಧರ್ಮ) ಲಕ್ಷ್ಯತಾವ ಚ್ಛೇದಕಾವಚ್ಛಿನ್ನ= ಗೋತ್ವದಿಂದ ಕೂಡಿರುವುದು ಗೋವು. ಅದರ ಭೇದ 'ಮಹಿಷವು ಗೋವಲ್ಲ' ಎಂದು ಹೇಳುವ ಭೇದ. ಇಲ್ಲಿ ಭೇದಕ್ಕೆ ಪ್ರತಿಯೋಗಿ ಗೋವು. ಪ್ರತಿಯೋಗಿತಾ ಅದರಲ್ಲಿದೆ. ಪ್ರತಿಯೋಗಿತಾ ನಿರೂಪಕವಾದದ್ದು (ಪ್ರತಿಯೋಗಿತೆಯನ್ನು ತೋರಿಸಿಕೊಟ್ಟದ್ದು) ಭೇದ. ಪ್ರತಿಯೋಗಿತಾ ನಿರೂಪಕವೆಂದರೂ ಪ್ರತಿಯೋಗಿತಾಕವೆಂದರೂ ಒಂದೇ. ಭೇದವಿರುವುದು ಮಹಿಷ. ಭೇದಸಾಮಾನಾಧಿಕರಣ್ಯ ಅಂದರೆ ಭೇದದ ಅಧಿಕರಣದಲ್ಲಿರು ವುದು= ಭೇದವಿದ್ದಲ್ಲಿ ಇರುವುದು. ಶೃಂಗಿತ್ವವು ಅಲ್ಲಿದೆ. ಗೋತ್ವಾವಚ್ಛಿನ್ನ ಪ್ರತಿಯೋಗಿತಾಕಭೇದವಿರುವ ಮಹಿಷಾದಿಗಳಲ್ಲಿರುವುದರಿಂದ ಶೃಂಗಿತ್ವ ಲಕ್ಷಣವು ಅತಿವ್ಯಾಪ್ತವಾಗುತ್ತದೆ. 'ಲಕ್ಷ್ಯತಾವಚ್ಛೇದಕ ಸಮಾನಾಧಿ ಕರಣಾತ್ಯಂತಾಭಾವ ಪ್ರತಿಯೋಗಿತ್ವಮ್' ಅವ್ಯಾಪ್ತಿಯ ಲಕ್ಷಣ. ಲಕ್ಷ್ಯ ತಾವಚ್ಛೇದಕ= ಗೋತ್ವ. ಸಮಾನಾಧಿಕರಣ= ಒಂದೇ ಅಧಿಕರಣ (ಆಶ್ರಯ) ಉಳ್ಳವುಗಳು. ಲಕ್ಷ್ಯತಾವಚ್ಛೇದಕ ಸಮಾನಾಧಿಕರಣಃ ಯಃ ಅತ್ಯಂತಾಭಾವಃ= ಗೋತ್ವ ಇರುವಲ್ಲಿ ಇರುವ ಅಭಾವ ಎಂದರ್ಥ. ನೀಲ

ಾಸಪವತ್ತ್ವಂ ಲಕ್ಷಣವೆಂದರೆ ಗೋತ್ವವಿರುವ ಬಿಳಿಗೋವುಗಳಲ್ಲಿ ನೀಲರೂಪದ ಅತ್ಯಂತಾಭಾವ ಇರುತ್ತದೆ. ಅತ್ಯಂತಾಭಾವಪ್ರತಿಯೋಗೀ= ನೀಲರೂಪ. ಪ್ರತಿಯೋಗಿತ್ವಂ ನೀಲರೂಪದಲ್ಲಿ ಬರುವುದರಿಂದ ಅವ್ಯಾಪ್ತವಾಗುತ್ತದೆ. 'ಲಕ್ಷ್ಯತಾವಚ್ಛೇದಕವ್ಯಾಪಕೀಭೂತಾಭಾವಪ್ರತಿಯೋಗಿತ್ವಂ' ಅಸಂಭವದ ಲಕ್ಷಣ. 'ಏಕಶಫವತ್ತ್ವಂ' ಗೋಲಕ್ಷಣ ವೆಂದರೆ ಅಸಂಭವ ಬರುತ್ತದೆ. ಲಕ್ಷ್ಯತಾವಚ್ಛೇದಕ ವಿದ್ದಲ್ಲಿ ಇರುವ ಅಭಾವಕ್ಕೆ ಪ್ರತಿಯೋಗಿಯಾಗಿರುವುದು. ಗೋತ್ವ ಎಲ್ಲೆಲ್ಲಿದೆಯೋ ಅಲ್ಲೆಲ್ಲಾ ಏಕಶಫವತ್ತ್ವಾಭಾವ ಇರುವುದರಿಂದ ಅದು ಲಕ್ಷ್ಯತಾವಚ್ಛೇದಕ ವ್ಯಾಪಕೀ ಭೂತಾಭಾವವಾಗುತ್ತದೆ. ಅಭಾವ ಪ್ರತಿಯೋಗಿತ್ವಂ ಏಕ ಶಫವತ್ತ್ವದಲ್ಲಿ ಬರುತ್ತದೆ. 'ಸಾಸ್ನಾದಿಮತ್ತ್ವಂ' (ಗಂಗೆ ತೊಗಲುಳ್ಳದ್ದು) ಗೋವಿನ ಲಕ್ಷಣವೆಂದರೆ ಆಗ ಎಲ್ಲಿಯೂ ದೋಷ ಬರುವುದಿಲ್ಲ.

ವಾಯವೀಯಶರೀರವು ವಾಯುಲೋಕದಲ್ಲಿದೆ. ತ್ವಗಿಂದ್ರಿಯವು (ವಾಯು ಸಂಬಂಧವಾದ) ವಾಯವೀಯೇಂದ್ರಿಯ. ಸ್ಪರ್ಶವನ್ನು ಗ್ರಹಿಸುವುದು ಪ್ರಯೋಜನ. ಇದು ಎಲ್ಲಾ ಶರೀರದಲ್ಲಿರುತ್ತದೆ. ಸ್ಪರ್ಶವಿಷಯಕ ಪ್ರತ್ಯಕ್ಷವನ್ನು ಹುಟ್ಟಿಸಿಕೊಡುವುದು ತ್ವಗಿಂದ್ರಿಯದ ಲಕ್ಷಣ. ಮರ ಮುಂತಾದವುಗಳನ್ನು, ಅಲ್ಲಾಡಿಸಲು ಕಾರಣವಾದ ಗಾಳಿಯು ವಿಷಯವಾಗುತ್ತದೆ. ಶರೀರದ ಒಳಗೇ ಸಂಚರಿಸುವ ಗಾಳಿಯು ಪ್ರಾಣವಾಯು ಆಗಿದೆ. ಇದು ಒಂದೇ ಆದರೂ ಆಯಾಯ ಉಪಾಧಿ =ಆಶ್ರಯ ಭೇದದಿಂದ ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನವೆಂಬ ಸಂಜ್ಞೆಗಳನ್ನು ಹೊಂದುತ್ತದೆ. ಮುಖ ಮೂಗುಗಳಲ್ಲಿ ಹೋಗಿ ಬರುವುದು ಪ್ರಾಣ. ಜಲಾದಿಗಳನ್ನು ಕೆಳಗೆ ಒಯ್ಯುವುದರಿಂದ ಅಪಾನವಾಗುತ್ತದೆ. ತಿಂದದ್ದನ್ನು ಜೀರ್ಣಿಸಲು ಅನುಕೂಲವಾದ ಜಠರಾನಲವನ್ನು ಹೆಚ್ಚಿಸುವುದರಿಂದ ಸಮಾನವೆನಿಸುತ್ತದೆ. ಮೇಲಕ್ಕೆ ಒಯ್ಯುವುದರಿಂದ ಉದಾನ, ನಾಡಿಗಳಲ್ಲಿ ಸಂಚರಿಸುವುದರಿಂದ ವ್ಯಾನವೆನಿಸುತ್ತದೆ. ಹೀಗೆ ಆಯಾಯ ಕ್ರಿಯಾರೂಪ ಉಪಾಧಿಭೇದದಿಂದ ಆಯಾಯ ಹೆಸರನ್ನು ಹೊಂದುತ್ತದೆ.

**ಶಬ್ದಗುಣಕಮಾಕಾಶಮ್ । ತಚ್ಚೈಕಂ ವಿಭು ನಿತ್ಯಂಚ ॥**

ಶಬ್ದರೂಪ ವಿಶೇಷಗುಣವುಳ್ಳದ್ದು ಆಕಾಶ. ಸಮವಾಯ ಸಂಬಂಧ ದಿಂದ ಶಬ್ದವುಳ್ಳದ್ದು ಆಕಾಶ ಎಂದರೇ ಸಾಕಾಗಿತ್ತು. ಗುಣ ಎಂದು ಹೆಚ್ಚು ಹೇಳಿರುವುದರಿಂದ ಶಬ್ದವೊಂದೇ ವಿಶೇಷಗುಣವೆಂದು ತಿಳಿಯುತ್ತದೆ. ಅದು ಅತಿವ್ಯಾಪ್ತಿನಿವಾರಣೆಗೋಸ್ಕರವಲ್ಲ. ಈ ಆಕಾಶವು ಒಂದೇ ಆಗಿರುತ್ತದೆ. ಇದು ವಿಭು ಮತ್ತು ನಿತ್ಯವಾಗಿನೆ. ಅನೇಕ ಆಕಾಶ ವೆಂಬುದರಲ್ಲಿ ಪ್ರಮಾಣವಿಲ್ಲ. ಸರ್ವಮೂರ್ತದ್ರವ್ಯಗಳ ಸಂಯೋಗ ವುಳ್ಳದ್ದು ವಿಭು. ಕ್ರಿಯೆಯಿಂದ ಕೂಡಿರುವುದು ಯಾವುದೋ ಅದು ಮೂರ್ತ ದ್ರವ್ಯ. ಪೃಥಿವೀ, ಅಪ್, ತೇಜ, ವಾಯು, ಮನಸ್ಸು ಇವು ಐದು ಮೂರ್ತ ಪದಾರ್ಥಗಳು. ಈ ಮೂರ್ತಪದಾರ್ಥಗಳ ಸಂಯೋಗ ಇರುವವುಗಳು ವಿಭು ಗಳಾಗುತ್ತವೆ. ಪೃಥಿವೀ, ಅಪ್, ತೇಜ, ವಾಯು, ಆಕಾಶ ಇವು ಐದಕ್ಕೆ ಭೂತವೆಂದು ಹೆಸರು. ಬಹಿರಿಂದ್ರಿಯಗಳಿಂದ ಗ್ರಹಿಸಲು ಯೋಗ್ಯವಾದ ವಿಶೇಷ ಗುಣವುಳ್ಳವುಗಳು ಯಾವುವೋ ಅವು ಭೂತಗಳು. ರೂಪ, ರಸ. ಗಂಧ, ಸ್ಪರ್ಶ, ಸ್ನೇಹ, ಸಾಂಸಿದ್ಧಿಕ ದ್ರವ, ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮಾಧರ್ಮ, ಸಂಸ್ಕಾರ, ಶಬ್ದಗಳು ವಿಶೇಷ ಗುಣಗಳು.

**ಅತೀತಾದಿ ವ್ಯವಹಾರಹೇತುಃ ಕಾಲಃ । ಸ ಚೈಕೋ ವಿಭು- ರ್ನಿತ್ಯಶ್ಚ ॥**

ಅತೀತಃ, (ಕಳೆದದ್ದು) ಭವಿಷ್ಯನ್, (ಆಗುವುದು) ವರ್ತಮಾನಃ (ಇರುವುದು) ಇತ್ಯಾದಿ ವ್ಯವಹಾರಗಳಿಗೆ ಅಸಾಧಾರಣ ಕಾರಣವಾದದ್ದು ಕಾಲ. ಇರತಕ್ಕ ಧ್ವಂಸದ ಪ್ರತಿಯೋಗಿಯು ಅತೀತ. ಇರತಕ್ಕ ಪ್ರಾಗ ಭಾವದ ಪ್ರತಿಯೋಗಿ ಭವಿಷ್ಯತ್. ಶಬ್ದಪ್ರಯೋಗಕ್ಕೆ ಅಧಿಕರಣವಾದ ಕಾಲ ವರ್ತಮಾನ. ಕೇವಲ ವ್ಯವಹಾರ ಕಾರಣವಾದದ್ದು ಎಂದು ಲಕ್ಷಣ ಹೇಳಿದರೆ ಘಟ ಎಂಬ ವ್ಯವಹಾರಕ್ಕೆ ಕಾರಣವಾದ ಘಟದಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದುದರಿಂದ ಅತೀತಾದಿವ್ಯವಹಾರ ಎಂದಿರುತ್ತಾನೆ. ಈ ಕಾಲವೂ ಒಂದೇ ಆಗಿ ವಿಭುವೂ ನಿತ್ಯವೂ ಆಗಿದೆ.

**ಪ್ರಾಚ್ಯಾದಿ ವ್ಯವಹಾರಹೇತುರ್ದಿಕ್ । ಸಾ ಚೈಕಾ ನಿತ್ಯಾ ವಿಭ್ವೀ ಚ ॥**

ಇದು ಪೂರ್ವ, ಇದು ದಕ್ಷಿಣ ಇತ್ಯಾದಿ ವ್ಯವಹಾರಕ್ಕೆ ಅಸಾಧಾರಣ ಕಾರಣವಾದದ್ದು ದಿಕ್. ಇದೂ ಒಂದೇ ಆಗಿ ನಿತ್ಯವೂ ವಿಭುವೂ ಆಗಿದೆ

ಉದಯ ಪರ್ವತಕ್ಕೆ ಸಮೀಪದಲ್ಲಿರುವ ದಿಕ್ ಪೂರ್ವ, ಅಸ್ತಪರ್ವತ ಸಂನಿಹಿತ ವಾದ ದಿಕ್ ಪಶ್ಚಿಮ, ಮೇರುಪರ್ವತಕ್ಕೆ ಸಂನಿಹಿತವಾದ ದಿಕ್ ಉತ್ತರ. ಮೇರುವಿಗೆ ವ್ಯವಹಿತವಾದ ದಿಕ್ ದಕ್ಷಿಣ ಎಂಬ ಹೆಸರನ್ನು ಹೊಂದುತ್ತದೆ.

**ಜ್ಞಾನಾಧಿಕರಣಮಾತ್ಮಾ । ಸ ದ್ವಿವಿಧಃ ಜೀವಾತ್ಮಾ ಪರಮಾತ್ಮಾ ಚೇತಿ । ತತ್ರೇಶ್ವರಃ ಸರ್ವಜ್ಞಃ ಪರಮಾತ್ಮಾ ಏಕ ಏವ । ಜೀವಸ್ತು ಪ್ರತಿಶರೀರಂ ಭಿನ್ನೋ ವಿಭುರ್ನಿತ್ಯಶ್ಚ ॥**

ಸಮವಾಯ ಸಂಬಂಧದಿಂದ ಜ್ಞಾನಕ್ಕೆ ಆಶ್ರಯನಾದವನು ಆತ್ಮನು. ಜೀವಾತ್ಮಾ ಪರಮಾತ್ಮಾ ಎಂದು ಇವನು ಎರಡು ವಿಧವಾಗಿರುತ್ತಾನೆ. ಇವರಿಬ್ಬರಲ್ಲಿ ಸಕಲಕ್ಕೂ ಈಶ್ವರನಾಗಿ (ಒಡೆಯನಾಗಿ) ಸರ್ವಜ್ಞಾನವುಳ್ಳ ಪರಮಾತ್ಮನು ಒಬ್ಬನೇ ಆಗಿರುತ್ತಾನೆ. ಜೀವನಾದರೋ ಪ್ರತಿ ಶರೀರ ದಲ್ಲಿಯೂ, ಬೇರೆಯಾಗಿದ್ದು ವಿಭುವೂ ನಿತ್ಯನೂ ಆಗಿರುತ್ತಾನೆ.

**ಸುಖಾದ್ಯುಪಲಬ್ಧಿಸಾಧನಮಿಂದ್ರಿಯಂ ಮನಃ । ತಚ್ಚ ಪ್ರತ್ಯಾತ್ಮನಿಯತತ್ವಾದನಂತಂ ಪರಮಾಣುರೂಪಂ ನಿತ್ಯಂ ಚ**

ಉಪಲಬ್ಧಿ= ಸಾಕ್ಷಾತ್ಕಾರ = ಪ್ರತ್ಯಕ್ಷಾನುಭವ. ಸುಖ ದುಃಖಾದಿಗಳ ಪ್ರತ್ಯಕ್ಷಾನುಭವಕ್ಕೆ ಸಾಧನವಾಗಿದ್ದು ಇಂದ್ರಿಯವಾಗಿರುವುದು ಮನಸ್ಸು. ಕೇವಲ ಇಂದ್ರಿಯ ಎಂದರೆ ಚಕ್ಷುರಾದಿಗಳಲ್ಲಿ ಇಂದ್ರಿಯತ್ವವಿರುವುದರಿಂದ ಅತಿವ್ಯಾಪ್ತಿ ಬರುತ್ತದೆ. ಆದುದರಿಂದ ಸುಖಾದಿಸಾಕ್ಷಾತ್ಕಾರ ಕಾರಣವೆಂದು ವಿಶೇಷಣದಲ ಹೇಳಿದೆ. ಇಂದ್ರಿಯ ಎಂಬ ವಿಶೇಷ್ಯಹೇಳದೆ ವಿಶೇಷಣ ಮಾತ್ರ ಹೇಳಿದರೆ ಆತ್ಮನಲ್ಲಿ ಅತಿವ್ಯಾಪ್ತಿ ಬರುತ್ತದೆ. ಸುಖಾದಿಗಳಿಗೆ ಸಮವಾಯಿಕಾರಣ ಆತ್ಮ. ಇಂದ್ರಿಯನೆಂದುದರಿಂದ ಆತ್ಮನಲ್ಲಿ ಇಂದ್ರಿಯತ್ವ ಇಲ್ಲದಿರುವುದರಿಂದ ದೋಷವಿಲ್ಲ.

**ಚಕ್ಷುರ್ಮಾತ್ರಗ್ರಾಹ್ಯೋ ಗುಣೋ ರೂಪಮ್ । ತಚ್ಚ ಶುಕ್ಲ-ನೀಲ ಪೀತರಕ್ತಹರಿತಕಪಿಶಚಿತ್ರಭೇದಾತ್ ಸಪ್ತವಿಧಮ್ । ಪೃಥಿವೀ ಜಲತೇಜೋವೃತ್ತಿ । ತತ್ರ ಪೃಥಿವ್ಯಾಂ ಸಪ್ತವಿಧಮ್ । ಅಭಾಸ್ವರ ಶುಕ್ಲಂ ಜಲೇ । ಭಾಸ್ವರಶುಕ್ಲಂ ತೇಜಸಿ ॥**

ಚಕ್ಷುರ್ಮಾತ್ರದಿಂದ ಗ್ರಾಹ್ಯವಾಗಿ ಗುಣವಾಗಿರುವುದು ರೂಪದ ಲಕ್ಷಣ. ಕೇವಲ ಕಣ್ಣಿನಿಂದ ಮಾತ್ರ ಗ್ರಹಿಸಲ್ಪಟ್ಟು (ನೋಡಲ್ಪಟ್ಟು) ಗುಣವಾಗಿರಬೇಕೆಂದರ್ಥ. ಇಲ್ಲಿಯೂ ಎರಡು ದಳಗಳಿವೆ. ಕೇವಲ ಗುಣವೆಂದು ವಿಶೇಷ್ಯ ಮಾತ್ರ ಹೇಳಿದರೆ ರಸಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಅವು ಗಳಲ್ಲಿಯೂ ಗುಣತ್ವ ಇರುತ್ತದೆ. ಆದುದರಿಂದ ಚಕ್ಷುರ್ಮಾತ್ರಗ್ರಾಹ್ಯವಾಗಿರ ಬೇಕೆಂದು ವಿಶೇಷಣ ಹೇಳಿದೆ. ಅವು ಕೇವಲ ಕಣ್ಣಿನಿಂದ ಗ್ರಹಿಸಲ್ಪಡುವುದಿಲ್ಲ. ಕೇವಲ ವಿಶೇಷಣ ಮಾತ್ರ ಹೇಳಿ ಗುಣ ಎಂದು ವಿಶೇಷ್ಯ ಹೇಳದಿದ್ದರೆ ರೂಪತ್ವ ಜಾತಿಯಲ್ಲಿ ಅತಿವ್ಯಾಪ್ತಿ ಬರುತ್ತದೆ. 'ಯೇನೇಂದ್ರಿಯೇಣ ಯಾವ್ಯಕ್ತಿಃ ಗೃಹ್ಯತೇ ತದ್ಗತಾ ಜಾತಿಸ್ತದಭಾವಶ್ಚ ತೇನೈವೇಂದ್ರಿಯೇಣ ಗೃಹ್ಯೇತೇ' 'ಯಾವ ಇಂದ್ರಿಯದಿಂದ ಯಾವ ಪದಾರ್ಥವು ಗ್ರಹಿಸಲ್ಪಡುವುದೋ ಅದೇ ಇಂದ್ರಿಯದಿಂದ ಆ ಪದಾರ್ಥದಲ್ಲಿರುವ ಜಾತಿಯೂ ಅದರ ಅಭಾವವೂ ಗೃಹೀತ ವಾಗುತ್ತದೆ.' ಎಂಬ ನ್ಯಾಯದಿಂದ ಕಣ್ಣಿನಿಂದ ರೂಪ ಗೃಹೀತವಾದರೆ ರೂಪ ತ್ವಜಾತಿಯೂ ರೂಪಾಭಾವವೂ ಕಣ್ಣಿನಿಂದಲೇ ಗ್ರಹಿಸಲ್ಪಡುತ್ತದೆ. ಆದುದ ರಿಂದ ಗುಣ ಎಂದಿದೆ. ರೂಪವು ಗುಣ. ರೂಪತ್ವವು ಗುಣವಲ್ಲ. ಚಕ್ಷು ರ್ಮಾತ್ರಗ್ರಾಹ್ಯ ಎಂದರೆ ಚಕ್ಷುಸ್ಸಿನಿಂದ (ಕಣ್ಣಿನಿಂದ) ಇತರವಾದ ಇಂದ್ರಿಯ ಗಳಿಂದ ಗ್ರಹಿಸಲ್ಪಡದೆ ಚಕ್ಷುಸ್ಸಿನಿಂದ ಗ್ರಹಿಸಲ್ಪಡುವುದು ಎಂದರ್ಥ. ಹೀಗೆ ಮಾತ್ರ ಪದದ ಅರ್ಥ ಹೇಳದಿದ್ದರೆ ಸಂಖ್ಯಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಒಂದು ಎರಡು ಎಂದು ಕಣ್ಣಿನಿಂದ ನೋಡಿಯೂ ಎಣಿಸ ಬಹುದಾದುದರಿಂದ ಚಕ್ಷುರ್ಗ್ರಾಹ್ಯತ್ವ ವಿಶಿಷ್ಟ ಗುಣತ್ವವು ಅವುಗಳಲ್ಲಿಯೂ ಇರುತ್ತದೆ. ಆದುದರಿಂದ ಮಾತ್ರ ಪದ ಹೇಳಿದೆ. ಈಗ ಮಾತ್ರ ಪದಕ್ಕೆ ಹೀಗೆ ಪರಿಷ್ಕಾರ ಮಾಡಿರುವುದರಿಂದ ಸಂಖ್ಯಾದಿಗಳು ನಯನಕ್ಕಿಂತ ಭಿನ್ನವಾದ ಇಂದ್ರಿಯದಿಂದಲೂ ಗ್ರಹಿಸ್ಪಡುವುದರಿಂದ ಚಕ್ಷುರ್ಮಾತ್ರ ಗ್ರಾಹ್ಯತ್ವ ಅವುಗಳಲ್ಲಿ ಬರುವುದಿಲ್ಲ. ಇಲ್ಲಿಯೂ ಚಕ್ಷುರಿಂದ್ರಿಯ ಭಿನ್ನೇಂದ್ರಿಯ ಗಳಿಂದ ಅಗ್ರಾಹ್ಯವಾಗಿರುವುದು (ಗ್ರಹಿಸಲ್ಪಡದಿರುವುದು) ಎಂದು ಒಂದೇ ದಳ ಹೇಳಿ ಚಕ್ಷುರಿಂದ್ರಿಯ ಗ್ರಾಹ್ಯವಾದುದ್ದು ಎಂದು ಹೇಳದಿದ್ದರೆ ಗುರುತ್ವಾದಿ ಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಅವು ಅತೀಂದ್ರಿಯಗಳು. ಯಾವ ಇಂದ್ರಿಯ ಗಳಿಂದಲೂ ಗ್ರಾಹ್ಯಗಳಲ್ಲ. ಆದುದರಿಂದ ಚಕ್ಷುರಿಂದ್ರಿಯ ಗ್ರಾಹ್ಯವೆಂದಿದೆ.

ಇಲ್ಲಿ ಗ್ರಾಹ್ಯ ಎಂದರೆ ಪ್ರತ್ಯಕ್ಷ ವಿಷಯವೆಂದರ್ಥ. ಅಗ್ರಾಹ್ಯ ಎಂದರೆ ಪ್ರತ್ಯಕ್ಷಕ್ಕೆ ಅವಿಷಯ ಎಂದರ್ಥ. ಆಗ 'ಚಕ್ಷುಸ್ಸಿನಿಂದ ಬೇರೆಯಾದ ಇಂದ್ರಿಯಗಳ ಪ್ರತ್ಯಕ್ಷಕ್ಕೆ ವಿಷಯವಾಗದೆ, ಚಕ್ಷುರಿಂದ್ರಿಯ ಪ್ರತ್ಯಕ್ಷಕ್ಕೆ ವಿಷಯವಾಗಿ ಗುಣವಾಗಿರುವುದು ರೂಪ ಲಕ್ಷಣ. ಗುಣಪದಕ್ಕೆ ಇಲ್ಲಿ ವಿಶೇಷಗುಣವೆಂದು ಅರ್ಥಮಾಡಬೇಕು. ಇಲ್ಲವಾದರೆ ಪ್ರಭಾಘಟ ಸಂಯೋಗ ದಲ್ಲಿ ಅತಿವ್ಯಾಪ್ತಿ ಬರುತ್ತದೆ. ಅದೂ ಕೇವಲಚಕ್ಷುರ್ಗ್ರಾಹ್ಯವಾಗಿರುತ್ತದೆ. ಸಂಯೋಗದಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ವಿಶೇಷ ಗುಣವಾಗಿರಬೇಕೆಂದು ಹೇಳುವುದಾದರೆ ಸಂಖ್ಯಾದಿಗಳಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ಹೇಳಿರುವ ಮಾತ್ರಪದ ಬೇಕಾಗಿಲ್ಲ. ಸಂಖ್ಯಾದಿಗಳೂ ವಿಶೇಷ ಗುಣವಾಗದಿರುವುದರಿಂದ ಅದರಿಂದಲೇ ಅಲ್ಲಿ ಅತಿವ್ಯಾಪ್ತಿವಾರಣೆಯಾಗುವುದರಿಂದ ವ್ಯರ್ಥವಲ್ಲವೇ? ಅಂದರೆ ಜಲಮಾತ್ರ ವೃತ್ತಿ (ಕೇವಲ ಜಲದಲ್ಲಿರುವ) ಸಾಂಸಿದ್ಧಿಕ ದ್ರವತ್ವ ದಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ಅದು ಸಾರ್ಥಕವಾಗುತ್ತದೆ. ಸಾಂಸಿದ್ಧಿಕ ದ್ರವ ವಿಶೇಷಗುಣ, ಅದು ಕಣ್ಣಿನಿಂದಲೂ ಗ್ರಾಹ್ಯವಾಗಿದೆ. 'ಚಕ್ಷುರ್ಮಾತ್ರ. ಗ್ರಾಹ್ಯ ಜಾತಿಮತ್ವೇ ಸತಿ ಗುಣತ್ವಂ' ಎಂಬುದೂ ರೂಪಲಕ್ಷಣವಾಗ ಬಹುದು. ಚಕ್ಷುರ್ಮಾತ್ರಗ್ರಾಹ್ಯವಾದ ಜಾತಿಯೆಂದರೆ ರೂಪತ್ವಜಾತಿ· ·ಯೇನೇಂದ್ರಿಯೇಣ–' ಹಿಂದಿನ ನ್ಯಾಯದಂತೆ ರೂಪತ್ವವೂ ಕಣ್ಣಿನಿಂದಲೇ ಗೃಹೀತವಾಗುತ್ತದೆ.

ರೂಪತ್ವಜಾತಿಯಿಂದ ಕೂಡಿ ಗುಣವಾಗಿರುವುದು ರೂಪ. ಸಂಯೋ ಗತ್ವಜಾತಿ ಕೇವಲ ನಯನೇಂದ್ರಿಯ ಗ್ರಾಹ್ಯವಲ್ಲ. ಘಟಪಟ ಸಂಯೋಗವು ತ್ವಗಿಂದ್ರಿಯದಿಂದಲೂ ತಿಳಿಯಲು ಸಾಧ್ಯ. ಅಲ್ಲಿರುವ ಸಂಯೋಗತ್ವ ಜಾತಿಯೂ, ತ್ವಗಿಂದ್ರಿಯಗ್ರಾಹ್ಯವಾಗಿರುತ್ತದೆ. ಇದಕ್ಕೆ ಜಾತಿಘಟಿತ ಲಕ್ಷಣವೆಂದು ಹೆಸರು. ಇಲ್ಲಿ ಚಕ್ಷುರ್ಮಾತ್ರ ಗ್ರಾಹ್ಯ ಜಾತಿಮತ್ತ್ವಂ ಎಂದು ಗುಣಪದ ಹೇಳವೇ ಹೇಳಿದರೆ ಸುವರ್ಣಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಸುವರ್ಣತ್ವಜಾತಿ ಚಕ್ಷುರ್ಮಾತ್ರಗ್ರಾಹ್ಯವಾಗಿರುತ್ತದೆ. ಆದುದರಿಂದ ಗುಣವೆನ್ನಬೇಕು. ಸುವರ್ಣ ಗುಣವಲ್ಲ. ಹೀಗೆಯೇ ಮುಂದೆ ರಸಾದಿ ಲಕ್ಷಣ ದಲ್ಲಿಯೂ, ವಿಶೇಷ್ಯಮಾತ್ರ ಹೇಳಿದರೆ ಇತರ ಗುಣಗಳಲ್ಲಿ ಅತಿವ್ಯಾಪ್ತಿ

ಬರುತ್ತದೆ. ವಿಶೇಷಣ ಮಾತ್ರ ಹೇಳಿದರೆ ರಸತ್ವ, ಗಂಧತ್ವಾದಿ ಜಾತಿಗಳಲ್ಲಿ ಅತಿವ್ಯಾಪ್ತಿ ಬರುವುದರಿಂದ ಎರಡೂ ದಳಗಳನ್ನು ಹೇಳಬೇಕು.

**ರಸನಗ್ರಾಹ್ಯೋ ಗುಣೋ ರಸಃ । ಸ ಚ ಮಧುರಾಮ್ಲ ಲವಣ ಕಟು:ಕಷಾಯ ತಿಕ್ತಭೇದಾತ್ ಷಡ್ವಿಧಃ । ಪೃಥಿವೀಜಲವೃತ್ತಿಃ । ತತ್ರ ಪೃಥಿವ್ಯಾಂ ಷಡ್ವಿಧಃ । ಜಲೇ ಮಧುರ ಏವ ॥**

ರಸನೇಂದ್ರಿಯ ಜನ್ಯ (ರಸನೇಂದ್ರಿಯದಿಂದ ಉಂಟಾದ) ಪ್ರತ್ಯಕ್ಷಕ್ಕೆ ವಿಷಯವಾಗಿದ್ದು ಗುಣವಾಗಿರುವುದು ರಸ. ಇದು ಮಧುರ, ಆಮ್ಲ, ಲವಣ. ಕಟು, ಕಷಾಯ, ತಿಕ್ತ (ಒಗಚು, ಕಹಿ) ಎಂಬ ಭೇದದಿಂದ ಆರು ವಿಧವಾಗಿರುತ್ತದೆ. ಈ ರಸವು ಪೃಥಿವೀ ಜಲಗಳಲ್ಲಿ ಇರುತ್ತದೆ. ಪೃಥಿವಿಯಲ್ಲಿ ಆರು ರೀತಿರಸವೂ ಇವೆ. ಜಲದಲ್ಲಿ ಕೇವಲ ಮಧುರರಸ ಮಾತ್ರ ಇರುತ್ತದೆ.

**ಘ್ರಾಣ ಗ್ರಾಹ್ಯೋ ಗುಣೋ ಗಂಧಃ । ಸ ದ್ವಿವಿಧಃ । ಸುರಭಿರ-ಸುರಭಿಶ್ಚ । ಪೃಥಿವೀ ಮಾತ್ರವೃತ್ತಿಃ ॥**

ನಾಸಿಕೇಂದ್ರಿಯ ಜನ್ಯ (ಮೂಗಿನಿಂದುಂಟಾದ) ಪ್ರತ್ಯಕ್ಷಕ್ಕೆ ವಿಷಯವಾಗಿ ಗುಣವಾಗಿರುವುದು ಗಂಧ. ಸುರಭಿ, ಅಸುರಭಿ ಎಂದು ಇದು ಎರಡು ವಿಧವಾಗಿದೆ. ಈ ಗಂಧವು ಕೇವಲ ಪೃಥಿವಿಯಲ್ಲಿ ಮಾತ್ರ ಇರುತ್ತದೆ. ನೀರಿನಲ್ಲಿ ಪೃಥಿವೀಪರಮಾಣು ಸಂಬಂಧದಿಂದ ಗಂಧ ತೋರುತ್ತದೆ. ಹಾಗೆಯೇ ವಾಯುವಿನಲ್ಲಿಯೂ, ಪೃಥಿವೀ ಪರಮಾಣುಗಳು ಇರುವುದರಿಂದ ಕೆಲವುವೇಳೆ ಪರಿಮಳ ಗಾಳಿ ಬರುತ್ತದೆ. ಪೃಥಿವೀ ಪರಮಾಣುಗಳು ಗಾಳಿಯಲ್ಲಿ ಹೋದರೆ, ಆ ವಸ್ತು ನಷ್ಟವಾಗುವುದಿಲ್ಲವೆ? ಎಂಬ ಶಂಕೆ ಬರಬಹುದು. ಆದರೆ, ಅದನ್ನು ಭೋಗಿಸುವವನ ಅದೃಷ್ಟದಿಂದ ಆ ವಸ್ತು ಹಾಗೆಯೇ ಇರುತ್ತದೆ ಎಂದು ತಾರ್ಕಿಕರ ಮತ.

**ತ್ವಗಿಂದ್ರಿಯಮಾತ್ರಗ್ರಾಹ್ಯೋ ಗುಣಃ ಸ್ಪರ್ಶಃ । ಸ ಚ ತ್ರಿವಿಧಃ । ಶಿತೋಷ್ಣಾನುಷ್ಣಶೀತಭೇದಾತ್ । ಪೃಥಿವ್ಯಪ್ತೇಜೋವಾಯುವೃತ್ತಿಃ । ತತ್ರ ಶೀತೋ ಜಲೇ । ಉಷ್ಣಸ್ತೇಜಸಿ । ಅನುಷ್ಣಶೀತಃ ಪೃಥಿವೀ ವಾಯ್ವೋಃ ।**

ತ್ವಗಿಂದ್ರಿಯಕ್ಕಿಂತ (ಚರ್ಮದಿಂದ) ಬೇರೆಯಾದ ಇಂದ್ರಿಯಗಳಿಂದುಂಟಾದ ಪ್ರತ್ಯಕ್ಷಕ್ಕೆ ಅವಿಷಯವಾಗಿ (ವಿಷಯವಾಗದೆ) ತ್ವಗಿಂದ್ರಿಯ ಜನ್ಯ ಪ್ರತ್ಯಕ್ಷಕ್ಕೆ ವಿಷಯವಾಗಿ ಗುಣವಾಗಿರುವುದು ಸ್ಪರ್ಶ. ಶೀತ, ಉಷ್ಣ, ಅನುಷ್ಣ ಶೀತವೆಂಬ ಭೇದದಿಂದ ಇದು ಮೂರು ವಿಧವಾಗಿದೆ. ಇದು ಪೃಥಿವೀ, ಅಪ್, ತೇಜಸ್ಸು, ವಾಯುಗಳಲ್ಲಿ ಇರುತ್ತದೆ.. ಈ ಮೂರು ಭೇದಗಳಲ್ಲಿ ಶೀತಸ್ಪರ್ಶವು ನೀರಿನಲ್ಲಿಯೂ, ಉಷ್ಣ ಸ್ಪರ್ಶವು ತೇಜಸ್ಸಿನಲ್ಲಿಯೂ, ಅನುಷ್ಣ ಶೀತವು ಪೃಥಿವೀವಾಯುಗಳಲ್ಲಿಯೂ ಇರುತ್ತವೆ. ಇಲ್ಲಿಯೂ ಸಂಖ್ಯಾದಿ ಸಾಮಾನ್ಯ ಗುಣಾದಿಗಳಲ್ಲಿ ಅತಿವ್ಯಾಪ್ತಿ ಬಾರದಿರಲು ಮಾತ್ರಪದ ಹೇಳಿದೆ. ಅದರಿಂದ ತೋರಿದ ವಿಶೇಷಣದಳದ ವಿವರವು ಹಿಂದೆ ಹೇಳಿದೆ. ಗ್ರಾಹ್ಯತ್ವವೆಂದರೆ ಹಿಂದಿನಂತೆ ಪ್ರತ್ಯಕ್ಷ ವಿಷಯತ್ವವೆಂದು ತಿಳಿಯಬೇಕು.

**ರೂಪಾದಿಚತುಷ್ಟಯಂ ಪೃಥಿವ್ಯಾಂ ಪಾಕಜಮನಿತ್ಯಂ ಚ। ಅನ್ಯತ್ರಾಪಾಕಜಂ ನಿತ್ಯಮನಿತ್ಯಂ ಚ। ನಿತ್ಯಗತಂ ನಿತ್ಯಂ। ಅನಿತ್ಯಗತಮನಿತ್ಯಮ್ ॥**

ರೂಪ, ರಸ, ಗಂಧ, ಸ್ಪರ್ಶಗುಣಗಳು ಪೃಥಿವಿಯಲ್ಲಿ ಪಾಕದಿಂದ ಹುಟ್ಟಿ ಅನಿತ್ಯವಾಗಿವೆ. ಬೇರೆಕಡೆ ಪಾಕದಿಂದ ಹುಟ್ಟದೆ ಇದ್ದು ನಿತ್ಯವೂ ಅನಿತ್ಯವೂ ಆಗಿರುತ್ತವೆ. ನಿತ್ಯದಲ್ಲಿರುವವುಗಳು ನಿತ್ಯವೂ, ಅನಿತ್ಯದಲ್ಲಿರುವವುಗಳು ಅನಿತ್ಯವೂ ಆಗಿರುತ್ತವೆ.

ವಿಜಾತೀಯವಾದ (ವಿಲಕ್ಷಣ) ತೇಜಸ್ಸಂಯೋಗಕ್ಕೆ ಪಾಕವೆಂದು ಹೆಸರು. ಇದರಿಂದ ನಾನಾ ಜಾತಿರೂಪಗಳುಂಟಾಗುತ್ತವೆ. ಹೀಗೆಯೇ ರಸಜನಕವಾದ ತೇಜಃಸಂಯೋಗವೂ ವಿಜಾತೀಯವಾಗಿರುತ್ತವೆ. ಗಂಧ ಜನಕ, ಸ್ಪರ್ಶ ಜನಕಗಳೂ ವಿಜಾತೀಯವಾಗಿರುತ್ತವೆ. ಈ ರೀತಿ ನಾಲ್ಕಕ್ಕೂ ಕಾರ್ಯವೈಲಕ್ಷಣ್ಯದಿಂದ ಭಿನ್ನ ಭಿನ್ನಪಾಕಗಳನ್ನು ಕಲ್ಪಿಸಬೇಕು. ಮಾವಿನ ಕಾಯಿಯನ್ನು ಹುಲ್ಲಿನ ಮೆದೆಯಲ್ಲಿ ಕೆಲಕಾಲ ಇಟ್ಟರೆ ಆಗ ಸಹಿರೂಪವಾದ ವಿಲಕ್ಷಣ ತೇಜಃಸಂಯೋಗದಿಂದ ಹಸುರುಬಣ್ಣ ಹೋಗಿ ಹಳದಿಯೋ ಕೆಂಪೋ ಬಣ್ಣವುಂಟಾಗುತ್ತದೆ. ಹುಳಿರಸ ಹಾಗೆಯೇ ಇರುತ್ತದೆ. ಕೆಲವು ಹಣ್ಣುಗಳಲ್ಲಿ ವಿಜಾತಿಯ ತೇಜಃಸಂಯೋಗದಿಂದ ರಸವೂ ಬೇರೆಯಾಗುತ್ತವೆ. ಹುಳಿಯಾಗಿದ್ದುದು ಸಿಹಿಯಾಗುತ್ತದೆ. ಬಣ್ಣ ಹಾಗೆಯೇ ಇದ್ದು

ರಸಪರಿವೃತ್ತಿ ಮಾತ್ರ (ಜೀರೆ ರಸ) ಆಗುತ್ತದೆ. ಕೆಲವು ಕಡೆ ರೂಪರಸ ಎರಡರ ಪರಿವೃತ್ತಿಯೂ ಆಗುತ್ತದೆ. ಹೀಗೆ ಗಂಧಪರಿವರ್ತನೆಯಿಂದ, ಕಠಿಣಸ್ಪರ್ಶ ವ್ಯತ್ಯಾಸದಿಂದ ಅದಕ್ಕೆ ಕಾರಣವಾದ ತೇಜಃಸಂಯೋಗವು ಬೇರೆ ಬೇರೆಯಾಗಿರುತ್ತದೆ. ಒಂದೇ ತೇಜಃಸಂಯೋಗವೆಂದರೆ ಆಗ ನಾಲ್ಕು ಗುಣಗಳ ಪರಿವೃತ್ತಿಯೂ (ವ್ಯತ್ಯಾಸವೂ) ಒಂದು ವಸ್ತುವಿನಲ್ಲಿ ಆಗಬೇಕು. ಇದು ಎಲ್ಲಿಯೋ ಒಂದೆರಡು ವಸ್ತುಗಳಲ್ಲಿ ನೋಡಬಹುದಾದರೂ ಹಲವು ಕಡೆ ವ್ಯಭಿಚಾರ ಬರುವುದರಿಂದ— ಒಂದೇ ಗುಣ ಪರಿವೃತ್ತವಾಗಿ ಇತರ ಗುಣಗಳು ಹಾಗೆಯೇ ಇರುವುದರಿಂದ ಒಪ್ಪಲು ಸಾಧ್ಯವಿಲ್ಲ. ಹೀಗೆ ರೂಪಾದಿಗಳು ಬೇರೆಯಾಗುವುದರಿಂದ ಪಾರ್ಥಿವ ಪರಮಾಣುಗಳು ಒಂದೇ ಜಾತೀಯಗಳಾದರೂ ಈ ಪಾಕಮಹಿಮೆಯಿಂದಲೇ ನಮಗೆ ವಿಜಾತೀಯ ದ್ರವ್ಯದ ಅನುಭವವಾಗುತ್ತದೆ. ಇದಕ್ಕೆ ಉದಾಹರಣೆ ನೋಡಿ. ಹಸುವು ಹುಲ್ಲನ್ನು ತಿನ್ನುತ್ತದೆ. ಅದನ್ನು ಮೆಲಕುಹಾಕುತ್ತದೆ. ಆಗ ಹುಲ್ಲಿನ ಪರಮಾಣುಗಳವರೆಗೆ ಸ್ವರೂಪ ನಾಶವಾಗುತ್ತದೆ. ಹುಲ್ಲಿಗೆ ಕಾರಣವಾದ ಪರಮಾಣುಗಳಲ್ಲಿ ವಿಜಾತೀಯ ತೇಜಃಸಂಯೋಗವಾದುದರಿಂದ ಅದರ ರೂಪರಸ ಗಂಧಸ್ಪರ್ಶಗಳು ನಾಶವಾಗುತ್ತವೆ. ಆಮೇಲೆ ಹುಲ್ಲಿನ ಪರಿಣಾಮವಾದ ಹಾಲಿನ ರೂಪ ರಸ ಗಂಧಸ್ಪರ್ಶಗಳಿಗೆ ಕಾರಣವಾದ ವಿಲಕ್ಷಣತೇಜಃಸಂಯೋಗವುಂಟಾಗುತ್ತದೆ. ಆದರಿಂದ ಹಾಲಿನ ಪರಮಾಣುಗಳಲ್ಲಿ ರೂಪಾದಿಗಳುಂಟಾಗಿ ಅವುಗಳಿಂದ ದ್ವ್ಯಣುಕಾದಿಗಳಾರಬ್ಧವಾಗಿ (ಹುಟ್ಟಿ) ಮಹಾದುಗ್ಧ (ಹಾಲು) ಉತ್ಪನ್ನವಾಗುತ್ತದೆ. ಹೀಗೆಯೇ ಹಾಲನ್ನುಂಟುಮಾಡಿದ ಪರಮಾಣುಗಳಿಂದಲೇ ವಿಲಕ್ಷಣ ಪಾಕದಿಂದ ಮೊಸರು ಹುಟ್ಟುತ್ತದೆ. ಇನ್ನೂ ವಿಲಕ್ಷಣ ಪಾಕದಿಂದ ಮೊಸರಿನ ಪರಮಾಣುಗಳಿಂದ ಬೆಣ್ಣೆಯುಂಟಾಗಿ, ಪಾಕಮಹಿಮೆಯಿಂದ ಬೆಣ್ಣೆಯ ಪರಮಾಣುಗಳಿಂದ ತುಪ್ಪವಾಗುತ್ತದೆ. ಹೀಗೆ ರೂಪಾದಿ ಪರಾವೃತ್ತಿ (ವ್ಯತ್ಯಾಸ) ವಿಲಕ್ಷಣತೇಜಃಸಂಯೋಗದಿಂದಲೇ ಉಂಟಾಗುತ್ತದೆ.

**ಏಕತ್ವಾದಿ ವ್ಯವಹಾರಹೇತುಃ ಸಂಖ್ಯಾ। ಸಾ ನವದ್ರವ್ಯವೃತ್ತಿಃ। ಏಕತ್ವಾದಿ ಪರಾರ್ಧಪರ್ಯಂತಾ । ಏಕತ್ವಂ ನಿತ್ಯಮನಿತ್ಯಂ ಚ ।**

**ನಿತ್ಯಗತಂ ನಿತ್ಯಮ್ । ಅನಿತ್ಯಗತಮನಿತ್ಯಮ್ । ದ್ವಿತ್ವಾದಿಕಂ ತುಸರ್ವತ್ರಾऽನಿತ್ಯಮೇವ ॥**

'ಒಂದು, ಎರಡು' ಇತ್ಯಾದಿ ವ್ಯವಹಾರಗಳಿಗೆ ಕಾರಣವಾಗಿರುವುದು ಸಂಖ್ಯಾಗುಣ. ಇದು ಒಂಬತ್ತು ದ್ರವ್ಯಗಳಲ್ಲಿಯೂ ಇರುತ್ತದೆ. ಏಕತ್ವ ದಿಂದ ಆರಂಭಿಸಿ ಪರಾರ್ಧದವರೆಗೆ ಇದರ ಅವಧಿ. ಏಕಂ(1), ದಶ(2), ಶತಂ(3), ಸಹಸ್ರಂ(4), ಅಯುತಂ(5), ಲಕ್ಷಂ(6), ನಿಯುತಂ(7), ಕೋಟಿಃ(8), ಅರ್ಬುದಂ(9), ವೃಂದಂ(10), ಖರ್ವಃ(11), ನಿಖರ್ವಃ(12), ಶಂಖಃ(13), ಪದ್ಮಃ(14), ಸಾಗರಃ(15), ಅಂತ್ಯಂ(16), ಮಧ್ಯಂ(17), ಪರಾರ್ಧಂ(18) ಎಂದು ದಶಕವೃದ್ಧಿಯಿಂದ ಈ ಹದಿನೆಂಟು ಸ್ಥಾನದ ಸಂಖ್ಯೆಯನ್ನು ಒಪ್ಪಿರುತ್ತಾರೆ. ಏಕತ್ವಸಂಖ್ಯೆ ನಿತ್ಯವೂ ಅನಿತ್ಯವೂ ಆಗಿರುತ್ತದೆ. ನಿತ್ಯಪದಾರ್ಥದಲ್ಲಿರುವ ಏಕತ್ವವು ನಿತ್ಯ. ಅನಿತ್ಯ ಪದಾರ್ಥದಲ್ಲಿರುವ ಏಕತ್ವವು ಅನಿತ್ಯ. ದ್ವಿತ್ವಾದಿ ಸಂಖ್ಯೆಗಳು ಯಾವಾಗಲೂ ಅನಿತ್ಯವೇ ಆಗಿರುತ್ತವೆ.

**ಮಾನವ್ಯವಹಾರಾಸಾಧಾರಣಂ ಕಾರಣಂ ಪರಿಮಾಣಮ್ । ನವ ದ್ರವ್ಯವೃತ್ತಿ । ತಚ್ಚತುರ್ವಿಧಮ್ ಅಣು, ಮಹತ್, ದೀರ್ಘಂ, ಹ್ರಸ್ವಂ ಚೇತಿ॥**

ಇದು ದೊಡ್ಡದು, ಇದು ಅಣು, ಇದು ಉದ್ದ ಇತ್ಯಾದಿ ವ್ಯವಹಾರಗಳಿಗೆ ಅಸಾಧಾರಣ ಕಾರಣವಾಗಿರುವುದು ಪರಿಮಾಣಗುಣ. ಇದು ಒಂಬತ್ತು ದ್ರವ್ಯಗಳಲ್ಲಿಯೂ ಇರುತ್ತದೆ. ಅಣು ಪರಿಮಾಣ, ಮಹತ್ ಪರಿಮಾಣ, ದೀರ್ಘಪರಿಮಾಣ, ಹ್ರಸ್ವಪರಿಮಾಣ ಎಂದು ಇದು ನಾಲ್ಕು ವಿಧವಾಗಿರುತ್ತದೆ.

**ಪೃಥಕ್‌ವ್ಯವಹಾರಾಸಾಧಾರಣಕಾರಣಂ ಪೃಥಕ್ತ್ವಮ್ । ಸರ್ವದ್ರವ್ಯವೃತ್ತಿ ॥**

'ಇದು ಅದರಿಂದ ಬೇರೆ' ಎಂಬ ವ್ಯವಹಾರಕ್ಕೆ ಅಸಾಧಾರಣ ಕಾರಣವಾದದ್ದು ಪೃಥಕ್ತ್ವಗುಣ. ಇದು ಎಲ್ಲಾ ದ್ರವ್ಯದಲ್ಲಿಯೂ ಇರುತ್ತದೆ.

**ಸಂಯುಕ್ತ ವ್ಯವಹಾರಹೇತುಃ ಸಂಯೋಗಃ । ಸರ್ವದ್ರವ್ಯವೃತ್ತಿಃ ॥**

'ಇವು ಸೇರಿಕೊಂಡಿವೆ' ಎಂಬ ವ್ಯವಹಾರಕ್ಕೆ ಕಾರಣವಾಗಿರುವುದು ಸಂಯೋಗಗುಣ. ಇದೂ ಎಲ್ಲಾ ದ್ರವ್ಯಗಳಲ್ಲಿಯೂ ಇರುತ್ತದೆ.

**ಸಂಯೋಗನಾಶಕೋ ಗುಣೋ ವಿಭಾಗಃ । ಸರ್ವ ದ್ರವ್ಯವೃತ್ತಿಃ ॥**

ಸಂಯೋಗನಾಶಕತ್ವೇ ಸತಿ ಗುಣತ್ವಂ ಎಂದು ವಿಭಾಗದಲಕ್ಷಣ. ಸತಿಸಪ್ತಮಿಯಿಂದ ವೈಶಿಷ್ಟ್ಯ ತೋರುವುದರಿಂದ ಸಂಯೋಗನಾಶಕತ್ವ ವಿಶಿಷ್ಟಗುಣತ್ವವು ವಿಭಾಗಲಕ್ಷಣವಾಗುತ್ತದೆ. ಸಂಯೋಗನಾಶಕವಾದದ್ದು ಎಂದು ವಿಶೇಷಣಮಾತ್ರ ಹೇಳಿದರೆ ಕ್ರಿಯೆಯಲ್ಲಿ ಅತಿವ್ಯಾಪ್ತಿ ಬರುತ್ತದೆ. ವಸ್ತುವಿನಲ್ಲಿ ಕ್ರಿಯೆಯುಂಟಾದರೂ ಸಂಯೋಗ ನಾಶವಾಗುತ್ತದೆ. ಆದುದ ರಿಂದ ಗುಣವೆನ್ನಬೇಕು. ಕ್ರಿಯೆಯಲ್ಲಿ ಗುಣತ್ವವಿಲ್ಲ.

**ಪರಾಪರವ್ಯವಹಾರಾಸಾಧಾರಣಕಾರಣೇ ಪರತ್ವಾಪರತ್ವೇ । ಪೃಥಿವ್ಯಾದಿ ಚತುಷ್ಟಯ ಮನೋವೃತ್ತಿನೀ । ತೇ ಚ ದ್ವಿವಿಧೇ । ದಿಕ್ಕೃತೇಕಾಲಕೃತೇ ಚ । ದೂರಸ್ಥೇ ದಿಕ್ಕೃತಂ ಪರತ್ವಮ್ । ಸಮೀಪಸ್ಥೇದಿಕ್ಕೃತಮಪರತ್ವಮ್। ಜ್ಯೇಷ್ಠೇ ಕಾಲಕೃತಂ ಪರತ್ವಮ್। ಕನಿಷ್ಠೇಕಾಲಕೃತಮಪರತ್ವಮ್ ॥**

'ಇದು ಪರವಾಗಿದೆ' ಎಂಬ ವ್ಯವಹಾರಕ್ಕೆ ಅಸಾಧಾರಣ ಕಾರಣ ವಾಗಿರುವುದು ಪರತ್ವಗುಣ. 'ಇದು ಅಪರ' ಎಂಬ ವ್ಯವಹಾರಕ್ಕೆ ಅಸಾ ಧಾರಣ ಕಾರಣವಾಗಿರುವುದು ಅಪರತ್ವಗುಣ. ಇವೆರಡು ಪೃಥಿವೀ, ಅಪ್. ತೇಜಸ್ಸು, ವಾಯುಗಳಲ್ಲಿಯೂ ಮನಸ್ಸಿನಲ್ಲಿಯೂ ಇರುತ್ತವೆ. ದಿಕ್ಕನ್ನೂ, ಕಾಲವನ್ನೂ ಅನುಸರಿಸಿ ಇವು ಎರಡು ವಿಧಗಳಾಗಿವೆ. ದೂರದಲ್ಲಿರುವಾಗ ದಿಕ್ಕಿನಿಂದ ಪರತ್ವವು ಬರುತ್ತದೆ. ಸಮೀಪದಲ್ಲಿರುವಾಗ ದಿಕ್ಕೃತ ಅಪರತ್ವವು ಬರುತ್ತದೆ. ಜ್ಯೇಷ್ಠನಲ್ಲಿ ಕಾಲನಿಮಿತ್ತವಾದ ಪರತ್ವವೂ ಕನಿಷ್ಠನಲ್ಲಿ ಕಾಲಕೃತ ಅಪರತ್ವವೂ ವ್ಯವಹರಿಸಲ್ಪಡುತ್ತವೆ.

**ಆದ್ಯಪತನಾಸಮವಾಯಿಕಾರಣಂ ಗುರುತ್ವಂ, ಪೃಥಿವೀ ಜಲವೃತ್ತಿ॥**

ಮೊದಲನೆಯ ಪತನ (ಬೀಳುವ) ಕ್ರಿಯೆಯಲ್ಲಿ ಅಸಮವಾಯಿಕಾರಣವಾಗಿರುವುದು ಗುರುತ್ವಗುಣ. ಎರಡನೆಯ ಪತನ ಕ್ರಿಯೆಯಲ್ಲಿ ವೇಗವೂ ಅಸಮವಾಯಿಕಾರಣವಾಗುವುದರಿಂದ ಅಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ಆದ್ಯಪತನವೆಂದಿದೆ. ಸ್ಯಂದನಾದಿ ಲಕ್ಷಣದಲ್ಲಿಯೂ ಹೀಗೆ ತಿಳಿಯಬೇಕು. ಇದು ಪೃಥಿವೀಜಲಗಳಲ್ಲಿ ಮಾತ್ರ ಇರುತ್ತದೆ.

**ಆದ್ಯಸ್ಯಂದನಾಸಮವಾಯಿಕಾರಣಂ ದ್ರವತ್ವಮ್ । ಪೃಥಿವ್ಯಪ್ತೇಜೋವೃತ್ತಿ। ತದ್ದ್ವಿವಿಧಂ ಸಾಂಸಿದ್ಧಿಕಂ ನೈಮಿತ್ತಿಕಂಚ। ಸಾಂಸಿದ್ಧಿಕಂಜಲೇ। ನೈಮಿತ್ತಿಕಂ ಪೃಥಿವೀತೇಜಸೋಃ। ಪೃಥಿವ್ಯಾಂ ಘೃತಾದಾವಗ್ನಿಸಂಯೋಗಜಂ ದ್ರವತ್ವಮ್ । ತೇಜಸಿ ಸುವರ್ಣಾದೌ ॥**

ಮೊದಲನೆಯ ಹರಿಯುವಿಕೆಯ ಕ್ರಿಯೆಗೆ ಅಸಮವಾಯಿಕಾರಣವಾಗಿರುವುದು ದ್ರವತ್ವ ಗುಣ. ಇದು ಪೃಥಿವೀ, ಜಲ ತೇಜಸ್ಸುಗಳಲ್ಲಿ ಇರುತ್ತದೆ. ಸಾಂಸಿದ್ಧಿಕ. ನೈಮಿತ್ತಿಕ ಎಂದು ಇದು ಎರಡು ವಿಧವಾಗಿವೆ. ಸಾಂಸಿದ್ಧಿಕ ದ್ರವತ್ವ ನೀರಿನಲ್ಲಿವೆ. ನೈಮಿತ್ತಿಕ ದ್ರವತ್ವವು ಪೃಥಿವೀತೇಜಸ್ಸುಗಳಲ್ಲಿ ಇದೆ. ಪೃಥಿವೀತತ್ವವಾದ ತುಪ್ಪ ಮುಂತಾದವುಗಳಲ್ಲಿ ಅಗ್ನಿ ಸಂಯೋಗದಿಂದುಟಾದ ದ್ರವತ್ವವಿದೆ. ಹಾಗೆಯೇ ತೇಜಸ್ಸಾದ ಸುವರ್ಣ (ಚಿನ್ನ) ದಲ್ಲಿ ಅಗ್ನಿಸಂಯೋಗಜದ್ರವತ್ವ ಇದೆ.

**ಚೂರ್ಣಾದಿ ಪಿಂಡೀಭಾವಹೇತುರ್ಗುಣಃ ಸ್ನೇಹಃ । ಜಲಮಾತ್ರವೃತ್ತಿಃ ॥**

'ಚೂರ್ಣಾದಿ ಪಿಂಡೀಭಾವ ಹೇತುತ್ವೇ ಸತಿ ಗುಣತ್ವಂ' ಸ್ನೇಹಲಕ್ಷಣ. ಚೂರ್ಣ= (ಹಿಟ್ಟು) ಮುಂತಾದವುಗಳನ್ನು ಉಂಡೆ ಮಾಡಲು ಕಾರಣವಾದ ಗುಣವೇ ಸ್ನೇಹ. ಹಿಂದಿನಂತೆ 'ಚೂರ್ಣಾದಿಪಿಂಡೀ ಭಾವ ಹೇತುತ್ವವಿಶಿಷ್ಟ ಗುಣತ್ವಂ' ಎಂದು ಲಕ್ಷಣ ಫಲಿತವಾಗುತ್ತದೆ. ಪಿಂಡೀಭಾವ ಎಂದರೆ ಚೂರ್ಣಾದಿಗಳನ್ನು ಹಿಡಿಯುವುದು, ಇನ್ನೊಂದು ಕಡೆ ಇಡುವುದು ಮುಂತಾದ ಕ್ರಿಯೆಗೆ ಕಾರಣವಾಗಿರುವ ವಿಲಕ್ಷಣಸಂಯೋಗ. ಮುದ್ದೆ ಮಾಡುವುದಕ್ಕೆ ಸ್ನೇಹವೇ ಕಾರಣವಾಗುವುದಲ್ಲದೆ ಜಲ ಮುಂತಾದವುಗಳಲ್ಲಿರುವ ದ್ರವತ್ವ ಕಾರಣವಾಗುವುದಿಲ್ಲ. ದ್ರವತ್ವವೂ ಕಾರಣವಾಗುವುದಾದರೆ ಚೂರ್ಣಾದಿಗಳಿಗೆ

ದ್ರುತ (ಕರಗಿದ) ಸುವರ್ಣಾದಿ ಸಂಯೋಗವಿರುವಾಗಲೂ ಮುದ್ದೆಕಟ್ಟಲು ಆಗಬೇಕಾಗುತ್ತದೆ. ಹಾಗಾಗದಿರುವುದರಿಂದ ಸ್ನೇಹವೇ ಅಸಾಧಾರಣಕಾರಣ ಎನ್ನಬೇಕು. ಸತ್ತ್ವಂತ ಹೇಳಿ, ಗುಣತ್ವ ಹೇಳದಿದ್ದರೆ ಕಾಲಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ವಿಶೇಷ್ಯಮಾತ್ರ ಹೇಳಿದರೆ ರಸಾದಿಗಳಲ್ಲಿ ಅತಿವ್ಯಾಪ್ತಿ. ಆದುದರಿಂದ ಎರಡು ದಳಗಳನ್ನೂ ಹೇಳಬೇಕು. ವಿಚಾರ ಮಾಡಿದರೆ ಪಿಂಡೀಭಾವಕ್ಕೆ ದ್ರುತ ಜಲಸಂಯೋಗವೇ ಕಾರಣ. ಸ್ನೇಹ ಕಾರಣವೆಂಬುದರಲ್ಲಿ ಯಾವ ಪ್ರಮಾಣವೂ ಇಲ್ಲ. ದ್ರುತ (ಕರಗಿದ ನಿರಾದ) ಜಲವೆಂದುದರಿಂದ ಕರಕ= ಮಂಜುಗಡ್ಡೆ ಮುಂತಾದವುಗಳ ಸಂಯೋಗದಿಂದ ಪಿಂಡೀಭಾವವಾಗದಿದ್ದರೂ ದೋಷ ಬರುವುದಿಲ್ಲ.

**ಶ್ರೋತ್ರಗ್ರಾಹ್ಯೋ ಗುಣಃಶಬ್ದಃ । ಆಕಾಶಮಾತ್ರವೃತ್ತಿಃ । ಸ ದ್ವಿವಿಧಃ–ಧ್ವನ್ಯಾತ್ಮಕೋ ವರ್ಣಾತ್ಮಕಶ್ಚ । ತತ್ರ ಧ್ವನ್ಯಾತ್ಮಕೋ ಭೇರ್ಯಾದೌ । ವರ್ಣಾತ್ಮಕಃ ಸಂಸ್ಕೃತಭಾಷಾದಿರೂಪಃ ॥**

ಶ್ರೋತ್ರೇಂದ್ರಿಯ (ಕಿವಿ) ದಿಂದುಂಟಾದ ಪ್ರತ್ಯಕ್ಷಕ್ಕೆ ವಿಷಯವಾಗಿ ಗುಣವಾಗಿರುವುದು ಶಬ್ದ. 'ಯೇನೇಂದ್ರಿಯ........' ನ್ಯಾಯದಿಂದ ಶಬ್ದತ್ವವೂ ಶ್ರೋತ್ರೇಂದ್ರಿಯಜನ್ಯ ಪ್ರತ್ಯಕ್ಷಕ್ಕೆ ವಿಷಯವಾಗುವುದರಿಂದ ಗುಣವೆನ್ನಬೇಕು. ಕೇವಲ ಗುಣವೆಂದರೆ ರಸಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಈ ಶಬ್ದಗುಣವು ಕೇವಲಾಕಾಶದಲ್ಲಿ ಇರುತ್ತದೆ. ಇದು ಎರಡು ವಿಧ. ಧ್ವನಿರೂಪವಾಗಿರುವುದು, ವರ್ಣರೂಪವಾಗಿರುವುದು. ಇವುಗಳಲ್ಲಿ ಧ್ವನಿರೂಪವಾದದ್ದು ಭೇರಿ= ನಗಾರಿ ಮುಂತಾದುವುಗಳಲ್ಲಿವೆ. ಸಂಸ್ಕೃತಭಾಷಾದಿ ರೂಪಗಳೇ ವರ್ಣಾತ್ಮಕಶಬ್ದ. ಪುನಃ ಮೂರುವಿಧ ಹೇಳಬಹುದು. (1) ಸಂಯೋಗದಿಂದ ಉಂಟಾಗುವ ಶಬ್ದ. (2) ವಿಭಾಗದಿಂದುಂಟಾಗುವ ಶಬ್ದ. (3) ಶಬ್ದದಿಂದ ಉಂಟಾಗುವ ಶಬ್ದ. ನಗಾರಿ ಕೋಲುಗಳ ಸಂಯೋಗದಿಂದ 'ಭಂಭಂ' ಎಂಬ ಶಬ್ದವಾಗುತ್ತದೆ. ಕೈಯ ಹೊಡೆತದಿಂದ ತಬಲೆ, ಮದ್ದಳೆ ಮುಂತಾದುವುಗಳಲ್ಲಿ ಶಬ್ದವಾಗುತ್ತದೆ. ಇವು ಸಂಯೋಗಜ ಶಬ್ದ. ಬಿದಿರನ್ನು ಸೀಳುವಾಗ ಎರಡುಸೀಳಿನ ವಿಭಾಗದಿಂದ 'ಚಟಚಟಾ' ಎಂಬ ಶಬ್ದವಾಗುತ್ತದೆ. ಇವೇ ವಿಭಾಗಜ ಶಬ್ದ. ಶಬ್ದಹುಟ್ಟಿದೊಡನೆ

ಶಬ್ದೋತ್ಪತ್ತಿದೇಶವನ್ನಾರಂಭಿಸಿ ಕಿವಿಯ ಪ್ರದೇಶದವರೆಗೆ ವೀಚೀತರಂಗ ನ್ಯಾಯದಿಂದಾಗಲೀ ಕದಂಬಮುಕುಲ ನ್ಯಾಯದಿಂದಾಗಲೀ ಮೊದಲನೆಯ ಶಬ್ದದಿಂದ ಶಬ್ದಧಾರೆ ಪರಂಪರೆ ಉಂಟಾಗುತ್ತದೆ. ಇಲ್ಲಿ ಪೂರ್ವ ಪೂರ್ವ ಶಬ್ದವು ಉತ್ತರೋತ್ತರ ಶಬ್ದವನ್ನು ಕುರಿತು ಕಾರಣವಾಗುತ್ತದೆ. ಇದೇ ಶಬ್ದದಿಂದುಂಟಾದ ಶಬ್ದ. (ಒಂದು ದೊಡ್ಡ ಅಲೆಯಿಂದ ಚಿಕ್ಕ ಅಲೆಗಳು ಪರಂಪರೆಯಿಂದುಂಟಾಗುತ್ತವೆ. ಅದರಂತೆ ಆದರೆ ಅದಕ್ಕೆ 'ವೀಚೀತರಂಗ ನ್ಯಾಯ' ಎನ್ನುತ್ತಾರೆ. ಹಾಗೆಯೇ ಹೂವು ಅರಳುವ ರೀತಿಯಿಂದಾದರೆ 'ಕದಂಬ ಮುಕುಲ' ನ್ಯಾಯವೆನ್ನುತ್ತಾರೆ.)

**ಸರ್ವವ್ಯವಹಾರ ಹೇತುರ್ಗುಣೋ ಬುದ್ಧಿರ್ಜ್ಞಾನಮ್ । ಸಾ ದ್ವಿವಿಧಾ ಸ್ಮೃತಿರನುಭವಶ್ಚ ॥**

ಎಲ್ಲಾ ವ್ಯವಹಾರಗಳಿಗೆ ಕಾರಣವಾಗಿದ್ದು ಗುಣತ್ವದಿಂದ ಕೂಡಿರುವುದು ಜ್ಞಾನ. ತರ್ಕಶಾಸ್ತ್ರದಲ್ಲಿ ಬುದ್ಧಿ, ಜ್ಞಾನ, ಉಪಲಬ್ಧಿ ಇವೆಲ್ಲಾ ಒಂದೇ ಅರ್ಥಕೊಡುವ ಪರ್ಯಾಯ ಪದಗಳು. ಸಾಂಖ್ಯ ಶಾಸ್ತ್ರದಂತೆ ಬುದ್ಧಿ ಜ್ಞಾನಗಳಿಗೆ ಭೇದವಿಲ್ಲ. ವ್ಯವಹಾರ ಎಂದರೆ ಇಲ್ಲಿ ಶಬ್ದಪ್ರಯೋಗ. ಜ್ಞಾನವಿಲ್ಲದೆ ಶಬ್ದಪ್ರಯೋಗ ಮಾಡುವುದು ಹೇಗೆ? ಆದುದರಿಂದ ಶಬ್ದಪ್ರಯೋಗರೂಪ ಸಕಲ ವ್ಯವಹಾರ ಹೇತು (ಕಾರಣ) ವಾದದ್ದು ಜ್ಞಾನ. ಸ್ಮೃತಿ ಅನುಭವವೆಂದು ಇದು ಎರಡು ರೀತಿಯಾಗಿರುತ್ತದೆ.

**ಸಂಸ್ಕಾರಮಾತ್ರ ಜನ್ಯಂ ಜ್ಞಾನಂ ಸ್ಮೃತಿಃ ॥**

'ಸಂಸ್ಕಾರ ಜನ್ಯತ್ವವಿಶಿಷ್ಟ ಜ್ಞಾನತ್ವಂ' ಸ್ಮೃತಿಯ ಲಕ್ಷಣ. ಸಂಸ್ಕಾರಕ್ಕಿಂತ ಬೇರೆಯಾದವುಗಳಿಂದ ಹುಟ್ಟದೆ ಸಂಸ್ಕಾರದಿಂದ ಹುಟ್ಟುವ ಜ್ಞಾನವೇ ಸ್ಮೃತಿ. ಕೇವಲ ಜ್ಞಾನವೆಂದರೆ ಅನುಭವದಲ್ಲಿ ಅತಿವ್ಯಾಪ್ತಿ. ಸಂಸ್ಕಾರ ಜನ್ಯತ್ವಂ ಎಂದು ಹೇಳಿದರೆ ಸಂಸ್ಕಾರ ಧ್ವಂಸದಲ್ಲಿ ಅತಿವ್ಯಾಪ್ತಿ. ಪ್ರತಿಯೋಗಿತಾ ಸಂಬಂಧದಿಂದ ಧ್ವಂಸವನ್ನು ಕುರಿತು ತಾದಾತ್ಮ್ಯಸಂಬಂಧದಿಂದ ಪ್ರತಿಯೋಗಿ (ವಸ್ತು) ಕಾರಣವಾದುದರಿಂದ ಸಂಸ್ಕಾರ ಧ್ವಂಸವನ್ನು ಕುರಿತು ಸಂಸ್ಕಾರವು ಕಾರಣವಾಗುತ್ತದೆ. ಜ್ಞಾನವೆಂಬ ವಿಶೇಷ್ಯಪದ ಹೇಳಿದರೆ ಸಂಸ್ಕಾರ ಧ್ವಂಸವು ಜ್ಞಾನವಾಗದಿರುವುದರಿಂದ ಅತಿವ್ಯಾಪ್ತಿ ಬರುವುದಿಲ್ಲ.

ಪ್ರತ್ಯಭಿಜ್ಞೆಯಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ಮಾತ್ರಪದ ಹೇಳಿದೆ. ಎದುರಿಗೆ ಇರುವ ವ್ಯಕ್ತಿಯಲ್ಲಿ ಹಿಂದೆ ನೋಡಿದ ವ್ಯಕ್ತಿಯ ಅಭೇದ ಜ್ಞಾನಕ್ಕೆ ಪ್ರತ್ಯಭಿಜ್ಞೆಯೆಂದು ಹೆಸರು. 'ಅವನೇ ಈ ರಾಮನು' ಎಂಬ ಜ್ಞಾನ. ಈ ಜ್ಞಾನವು ಸಂಸ್ಕಾರ ಮತ್ತು ಇಂದ್ರಿಯ ಸಂನ್ನಿಕರ್ಷ (ಸಂಯೋಗ) ಗಳಿಂದ ಉಂಟಾಗುತ್ತದೆ. ಕೇವಲ ಸಂಸ್ಕಾರದಿಂದ ಹುಟ್ಟದಿರುವುದರಿಂದ ಅತಿವ್ಯಾಪ್ತಿ ಬರುವುದಿಲ್ಲ. 'ಅವನೇ' ಎಂಬ ಅಂಶದಲ್ಲಿ ಸಂಸ್ಕಾರ ಕಾರಣ. 'ಇವನು' ಎಂಬ ಅಂಶದಲ್ಲಿ ಇಂದ್ರಿಯಸಂನಿಕರ್ಷ ಕಾರಣ. ಆದುದರಿಂದ 'ತತ್ತೇದಂ ತಾವಗಾಹಿ ಜ್ಞಾನಂ ಪ್ರತ್ಯಭಿಜ್ಞಾ' ಎಂದು ಇದರ ಲಕ್ಷಣ ಹೇಳುತ್ತಾರೆ.

**ತದ್ಭಿನ್ನಂ ಜ್ಞಾನಮನುಭವಃ । ಸ ದ್ವಿವಿಧಃ–ಯಥಾರ್ಥೋಽ–ಯಥಾರ್ಥಶ್ಚ ॥**

ಸ್ಮೃತಿಭಿನ್ನವಾದ ಜ್ಞಾನವು ಅನುಭವವಾಗುತ್ತದೆ. ಸ್ಮೃತಿಭಿನ್ನತ್ವೇ ಸತಿ ಜ್ಞಾನತ್ವಂ, 'ಸ್ಮೃತಿಭಿನ್ನತ್ವವಿಶಿಷ್ಟಜ್ಞಾನತ್ವಂ' ಅನುಭವದ ಲಕ್ಷಣ. ಕೇವಲ ಜ್ಞಾನವೆಂಬ ವಿಶೇಷ್ಯ ಹೇಳಿದರೆ ಸ್ಮೃತಿಯಲ್ಲಿ ಅತಿವ್ಯಾಪ್ತಿ. ಕೇವಲ ಸ್ಮೃತಿಭಿನ್ನವೆಂಬ ವಿಶೇಷಣ ಹೇಳಿದರೆ ಘಟಾದಿಗಳಲ್ಲಿ ಅತಿವ್ಯಾಪ್ತಿ. ಆದುದರಿಂದ ಎರಡೂ ಹೇಳಬೇಕು. ಯಥಾರ್ಥಾನುಭವ, ಅಯಥಾರ್ಥಾನುಭವ ವೆಂದು ಇದು ಎರಡು ವಿಧವಾಗಿದೆ.

**ತದ್ವತಿ ತತ್ಪ್ರಕಾರಕೋಽನುಭವೋ ಯಥಾರ್ಥಃ । ಸೈವ ಪ್ರಮೇತ್ಯುಚ್ಯತೇ ॥**

ಯಾವುದೋ ಒಂದು ಧರ್ಮವುಳ್ಳ ವಸ್ತುವಿನಲ್ಲಿ ಆ ಧರ್ಮವೇ ವಿಶೇಷಣವಾಗಿ ಆ ಧರ್ಮಿಯೇ ವಿಶೇಷ್ಯವಾಗಿ ತೋರುವ ಜ್ಞಾನವು ಯಥಾರ್ಥಾನುಭವ. ತದ್ವತಿ ಎಂಬಲ್ಲಿ ಸಪ್ತಮಿಗೆ ವಿಶೇಷ್ಯವೆಂದರ್ಥ. ತತ್‌ಪದದಿಂದ ಪ್ರಕಾರ (ವಿಶೇಷಣ) ವಾಗಿ ತೋರುವ ಧರ್ಮ ತೆಗೆದುಕೊಳ್ಳಬೇಕು 'ತದ್ವದ್ವಿಶೇಷ್ಯಕತ್ವೇ ಸತಿ ತತ್ಪ್ರಕಾರಕಾನು ಭವತ್ವಂ' ಯಥಾರ್ಥಾನುಭವ ಲಕ್ಷಣ. ವಿಶೇಷ್ಯತ್ವಕ್ಕೆ ನಿರೂಪಕತಾಸಂಬಂಧದಿಂದ ಅನುಭವದಲ್ಲಿ ಅನ್ವಯ. (ವಿಶೇಷ್ಯತೆಯನ್ನು ನಿರೂಪಿಸುವುದು) ವಿಶೇಷ್ಯತಾನಿರೂಪಕವಾದದ್ದು ಅನು

ಭವ. ಆಗ ' ತದ್ವನ್ನಿಷ್ಠ ವಿಶೇಷ್ಯತಾ ನಿರೂಪಕತ್ವೇ ಸತಿ ತನ್ನಿಷ್ಠಪ್ರಕಾರತಾ ನಿರೂಪಕತ್ವೇ ಸತಿ ಅನುಭವತ್ವಂ ' ಎಂದು ಲಕ್ಷಣವಾಗುತ್ತದೆ. ಘಟತ್ವದಿಂದ ಕೂಡಿದ ಘಟದಲ್ಲಿ ' ಅಯಂ ಘಟಃ ' ಎಂಬ ಅನುಭವ ಬಂದರೆ ಅಲ್ಲಿ ಘಟತ್ವವುಳ್ಳ ಘಟವೇ ವಿಶೇಷ್ಯ. ಘಟತ್ವ ಪ್ರಕಾರ.(ವಿಶೇಷಣ) 'ಅಯಂ ಘಟಃ' ಎಂಬ ಜ್ಞಾನದಲ್ಲಿ ಘಟವು ವಿಶೇಷ್ಯವಾಗಿ ಘಟತ್ವವು ಪ್ರಕಾರವಾಗಿ ತೋರು ವುದರಿಂದ ಯಥಾರ್ಥಾನುಭವವಾಗುತ್ತದೆ. ವಿಶೇಷ್ಯತಾ ಘಟದಲ್ಲಿದೆ. ಪ್ರಕಾರತಾ ಘಟತ್ವರೂಪ ಪ್ರಕಾರದಲ್ಲಿದೆ. ಇದನ್ನು ನಿರೂಪಿಸುವುದು ಜ್ಞಾನವಾದುದರಿಂದ ನಿರೂಪಕವು ಜ್ಞಾನವಾಗುತ್ತದೆ. ರಜತದಲ್ಲಿ 'ಇದಂ ರಜತಂ ' ಎಂಬ ಜ್ಞಾನ ಬಂದರೆ ಇದು ಯಥಾರ್ಥ. ರಜತತ್ವವುಳ್ಳದ್ದು ರಜತ. ಇದು ವಿಶೇಷ್ಯವಾದುದರಿಂದ ರಜತತ್ವನನ್ನಿಷ್ಠ ವಿಶೇಷ್ಯತಾ ನಿರೂಪ ಕತ್ವ ಜ್ಞಾನಕ್ಕೆ ಬರುತ್ತದೆ. ಹಾಗೆಯೇ ರಜತತ್ವಪ್ರಕಾರತಾ ಶಾಲಿಯೂ, (ಪ್ರಕಾರತೆಯಿಂದ ಕೂಡಿರುವುದು) ಈ ಜ್ಞಾನವಾಗಿರುತ್ತದೆ. ಹೀಗೆ ನಿರೂಪ್ಯ ನಿರೂಪಕಭಾವ ಹೇಳದಿದ್ದರೆ ರಂಗರಜತ (ಕಪ್ಪೆಚಿಪ್ಪು + ಬೆಳ್ಳಿ) ಗಳಲ್ಲಿ ವ್ಯತ್ಯ ಸ್ತವಾಗಿ 'ಇಮೇ ರಜತರಂಗೇ' ಇವು ಬೆಳ್ಳಿ, ಕಪ್ಪೆಚಿಪ್ಪು ಎಂದು ತಿಳಿದ ಭ್ರಮಾ ತ್ಮಕ ಜ್ಞಾನದಲ್ಲಿ ಅತಿವ್ಯಾಪ್ತಿ ಬರುತ್ತದೆ. ಈ ಜ್ಞಾನದಲ್ಲಿಯೂ ರಜತತ್ವವು ಪ್ರಕಾರವಾಗಿಯೂ ರಜತವು ವಿಶೇಷ್ಯವಾಗಿಯೂ ರಂಗತ್ವವು ಪ್ರಕಾರವಾಗಿ ರಂಗವು ವಿಶೇಷ್ಯವಾಗಿ ತೋರುತ್ತದೆ. ಆದರೆ ನಿರೂಪ್ಯನಿರೂಪಕಭಾವ ಮಾತ್ರ ಬೇರೆಯಾಗಿದೆ. ಈ ನಿರೂಪ್ಯನಿರೂಪಕಭಾವವನ್ನು ಲಕ್ಷಣದಲ್ಲಿ ಹೇಳಿದರೆ ಅತಿವ್ಯಾಪ್ತಿ ಬರುವುದಿಲ್ಲ. ರಜತತ್ವ ಪ್ರಕಾರತೆಯಲ್ಲಿ ರಜತತ್ವವದ್ವಿಶೇಷ್ಯತಾನಿ ರೂಪಿತತ್ವವು ಬರುವುದಿಲ್ಲ. ಹಾಗೆಯೇ ರಂಗತ್ವ ಪ್ರಕಾರತೆಗೆ ರಂಗತ್ವವದ್ವಿ ಶೇಷ್ಯತಾನಿರೂಪಿತತ್ವವೂ ಇಲ್ಲ. ' ರಜತರಂಗೇ ' ಎಂಬ ಸಮೂಹಾಲಂಬನ (ನಾನಾ ಮುಖ್ಯ ವಿಶೇಷ್ಯ ತೋರುವ ಜ್ಞಾನ) ಭ್ರಮಜ್ಞಾನದಲ್ಲಿ ರಂಗಾಂಶದಲ್ಲಿ ರಜತತ್ವವೂ ತೋರುವುದರಿಂದ ರಜತತ್ವಪ್ರಕಾರತೆಯು ರಂಗತ್ವವದ್ವಿಶೇಷ್ಯತಾ ನಿರೂಪಿತವಾಗುತ್ತದೆ. ಹಾಗೆಯೇರಜತಾಂಶದಲ್ಲಿ ರಂಗತ್ವವು ತೋರುವುದರಿಂದ ರಂಗತ್ವಪ್ರಕಾರತೆಯು ರಜತತ್ವವದ್ವಿಶೇಷತಾನಿರೂಪಿತ ವಾಗುತ್ತದೆ. ರಜತತ್ವಪ್ರಕಾರತೆಯು ರಜತತ್ವವುಳ್ಳ ರಜತದಲ್ಲಿರುವ ವಿಶೇಷ್ಯತಾ ನಿರೂಪಿತವಾದರೇ ಯಥಾರ್ಥವಾಗುತ್ತದೆ. ಅನೇಕ ಪ್ರಕಾರ

ಅನೇಕ ವಿಶೇಷ್ಯತೋರುವ ಜ್ಞಾನಕ್ಕೆ ಸಮೂಹಾಲಂಬನ ಜ್ಞಾನವೆನ್ನುತ್ತಾರೆ. ಒಂದು ವಸ್ತುವಿನಲ್ಲಿ ಸಹಜ ಧರ್ಮವಿದ್ದು ಆ ಧರ್ಮದಿಂದ ಕೂಡಿದ ಧರ್ಮಿ ಜ್ಞಾನವೇ ಯಥಾರ್ಥಾನುಭಾವಜ್ಞಾನ. ಇದನ್ನೇ ಪ್ರಮಾತ್ಮಕಜ್ಞಾನ ವೆನ್ನುತ್ತಾರೆ.

**ತದಭಾವವತಿ ತತ್ಪ್ರಕಾರಕೋಽನುಭವೋಽಯಥಾರ್ಥಃ ||**

ಯಥಾರ್ಥಕ್ಕೆ ವಿರುದ್ಧವಾದದ್ದು ಅಯತಾರ್ಥ. ಯಾವುದೋ ಒಂದು ಧರ್ಮ ಇಲ್ಲದಿರುವ ವಸ್ತುವಿನಲ್ಲಿ ಆ ಧರ್ಮ ಇದೆಯೆಂದು ತಿಳಿದ ಜ್ಞಾನ. ಹಿಂದಿನಂತೆ ಪರಿಷ್ಕಾರಮಾಡಿದರೆ ' ತದಭಾವವನ್ನಿಷ್ಠ (ಆ ಧರ್ಮ ಇಲ್ಲ ದಿರುವ ಧರ್ಮಿಯಲ್ಲಿರುವ) ವಿಶೇಷ್ಯತಾನಿರೂಪಿತ ತನ್ನಿಷ್ಠ ಪ್ರಕಾರತಾ ಶಾಲಿ ಜ್ಞಾನತ್ವಂ ' ಎಂದು ಲಕ್ಷಣವಾಗುತ್ತದೆ. ಆ ಧರ್ಮವಿಲ್ಲದಿರುವ ಧರ್ಮಿಯು ವಿಶೇಷ್ಯ. ವಿಶೇಷ್ಯತಾ ಅದರಲ್ಲಿದೆ. ಅದರಿಂದ ಆ ಧರ್ಮದಲ್ಲಿರುವ ಪ್ರಕಾರ ತೆಯು ನಿರೂಪಿತವಾಗುತ್ತದೆ. ಆ ವಿಶೇಷ್ಯತಾನಿರೂಪಿತಪ್ರಕಾರತಾ ತೋರುವ ಜ್ಞಾನವೇ ಅಯತಾರ್ಥ. ಇಲ್ಲಿಯೂ ಪರಸ್ಪರ ನಿರೂಪ್ಯನಿರೂ ಪಕ ಭಾವ ಹೇಳದಿದ್ದರೆ ರಂಗರಜತಗಳಲ್ಲಿ ' ಇಮೇ ರಂಗರಜತೇ ' ಎಂಬ ಸರಿಯಾದ ಸಮೂಹಾಲಂಬನ ಜ್ಞಾನದಲ್ಲಿ ಅತಿವ್ಯಾಪ್ತಿ ಬರುತ್ತದೆ. ಹಿಂದೆ ಹೇಳಿದಂತೆ ಈ ಜ್ಞಾನದಲ್ಲಿ ರಂಗ, ರಜತ ಉಭಯ ವಿಶೇಷ್ಯಕತ್ವವು ಇದೆ. (ಉಭಯ ವಿಶೇಷ್ಯತಾನಿರೂಪಕವಾಗುತ್ತದೆ.) ರಂಗವೂ ರಜತವೂ ಎರಡೂ ವಿಶೇಷ್ಯಗಳಾಗಿವೆ. ರಜತತ್ವರಂಗತ್ವೋಭಯಪ್ರಕಾರಕತ್ವವೂ ಇದೆ. ರಜತತ್ವ ಪ್ರಕಾರತಾ ನಿರೂಪಕವೂ ರಂಗತ್ವಪ್ರಕಾರತಾನಿರೂಪಕವೂ ಆಗಿದೆ. ಆದುದರಿಂದ ರಂಗತ್ವಾಭಾವವದ್ರಜತವಿಶೇಷ್ಯಕತ್ವ ರಂಗತ್ವ ಪ್ರಕಾರತ್ವಗಳೂ, ರಜತತ್ವಾಭಾವವದ್ರಂಗ ವಿಶೇಷ್ಯಕತ್ವ ರಜತತ್ವ ಪ್ರಕಾರ ತ್ವಗಳು ತೋರುತ್ತವೆ. ಪರಸ್ಪರ ನಿರೂಪ್ಯನಿರೂಪಕಭಾವ ಹೇಳಿರುವುದರಿಂದ ರಜತದಲ್ಲಿಯೇ ರಜತತ್ವ ತೋರುವುದರಿಂದ ರಂಗದಲ್ಲಿಯೇರಂಗತ್ವತೋರುವು ದರಿಂದ ರಜತತ್ವಪ್ರಕಾರತೆಯಲ್ಲಿ ರಜತತ್ವಾಭಾವ (ರಜತತ್ವಇಲ್ಲದ)ವದ್ರಂಗ ವಿಶೇಷ್ಯತಾನಿರೂಪಿತತ್ವವುಬರುವುದಿಲ್ಲ. ರಂಗತ್ವಪ್ರಕಾರತೆಗೂರಂಗತ್ವಾಭಾವ (ರಂಗತ್ವಇಲ್ಲದ)ವದ್ರಜತ ವಿಶೇಷ್ಯತಾ ನಿರೂಪಿತತ್ವವೂ ಬರುವುದಿಲ್ಲ. ಶುಕ್ತಿ

ಯನ್ನು (ಕಪ್ಪೆಚಿಪ್ಪು) ನೋಡಿ 'ಇದು ರಜತ' ಎಂಬ ಜ್ಞಾನಬಂದರೆ ಇದು ಅಯತಾರ್ಥ. ಇಲ್ಲಿ ಶುಕ್ತಿಯಲ್ಲಿ ರಜತತ್ವ ಇಲ್ಲ. ರಜತತ್ವಾಭಾವ ವುಳ್ಳದ್ದು (ರಜತತ್ವ ಇಲ್ಲದಿರುವುದು) ಶುಕ್ತಿ. ರಜತತ್ವಾಭಾವವಚ್ಛುಕ್ತಿಯು ವಿಶೇಷ್ಯ. ವಿಶೇಷ್ಯತಾ ಅದರಲ್ಲಿದೆ. ಅದರಿಂದ ನಿರೂಪಿತವಾದದ್ದು ರಜತತ್ವಪ್ರಕಾರತಾ. ರಜತತ್ವಾಭಾವವನಿಷ್ಠವಿಶೇಷ್ಯತಾನಿರೂಪಿತಪ್ರಕಾರತಾ ಶಾಲಿತ್ವಂ (ಕೂಡಿರುವುದು) 'ಇದಂ ರಜತಂ'= 'ಇದು ರಜತ' ಎಂಬ ಜ್ಞಾನದಲ್ಲಿ ಬರುವುದರಿಂದ ಅಯತಾರ್ಥವಾಗುತ್ತದೆ.

**ಯಥಾರ್ಥಾನುಭವಶ್ಚತುರ್ವಿಧಃ ಪ್ರತ್ಯಕ್ಷಾನುಮಿತ್ಯುಪಮಿತಿ ಶಾಬ್ದಭೇದಾತ್ ॥**

ಯಥಾರ್ಥಾನುಭವವು ನಾಲ್ಕು ರೀತಿಯಾಗಿರುತ್ತದೆ. ಪ್ರತ್ಯಕ್ಷ. ಅನುಮಿತಿ, ಉಪಮಿತಿ, ಶಾಬ್ದ ಗಳೆಂದು ಇವುಗಳ ಹೆಸರು. ಪ್ರಾಭಾಕರರು ಅರ್ಥಾಪತ್ತಿಯನ್ನೂ, ಭಾಟ್ಟ, ವೇದಾಂತಿಗಳು ಅನುಪಲಬ್ಧಿ ಪ್ರಮಾಣದಿಂದ ಬಂದ ಅನುಪಲಬ್ಧಿಕವನ್ನೂ, ಪೌರಾಣಿಕರು ಸಾಂಭವಿಕ, ಐತಿಹ್ಯಗಳನ್ನೂ. ಚೇಷ್ಟಾಪ್ರಮಾಣದಿಂದ ಬಂದ ಚೈಷ್ಟಕವನ್ನು ತಾಂತ್ರಿಕರೂ ಹೆಚ್ಚಾಗಿ ಅಂಗೀಕರಿಸಿರುತ್ತಾರೆ. ಇವೆಲ್ಲವೂ ನಾಲ್ಕರಲ್ಲಿಯೇ ಅಡಕವಾಗುತ್ತವೆಂದು ನೈಯಾಯಿಕರ ಮತ.

**ತತ್ಕರಣಮಪಿ ಚತುರ್ವಿಧಂ-ಪ್ರತ್ಯಕ್ಷಾನುಮಾನೋಪಮಾನ ಶಬ್ದಭೇದಾತ್ ॥**

ಈ ನಾಲ್ಕು ಪ್ರಮಾತ್ಮಕ ಜ್ಞಾನಗಳಿಗೆ ಕರಣ =ಅಸಾಧಾರಣಕಾರಣವಾಗಿ ನಾಲ್ಕು ಪ್ರಮಾಣಗಳಿವೆ. (ಇವನ್ನು ಹುಟ್ಟಿಸುವುವು) ಪ್ರತ್ಯಕ್ಷ ಪ್ರಮಾಣದಿಂದ ಪ್ರತ್ಯಕ್ಷಯಥಾರ್ಥಜ್ಞಾನವೂ, ಅನುಮಾನ ಪ್ರಮಾಣದಿಂದ ಅನುಮಿತಿರೂಪಯಥಾರ್ಥಜ್ಞಾನವೂ, ಉಪಮಾನ ಪ್ರಮಾಣದಿಂದ ಉಪಮಿತಿಜ್ಞಾನವೂ ಶಬ್ದಪ್ರಮಾಣದಿಂದ ಶಾಬ್ದಜ್ಞಾನವೂ ಉಂಟಾಗುತ್ತದೆ, 'ಪ್ರಮಾಕರಣತ್ವಂ' ಎಂದು ಈ ನಾಲ್ಕು ಪ್ರಮಾಣಗಳ ಸಾಮಾನ್ಯ ಲಕ್ಷಣ. ಒಮ್ಮೊಂದುಪ್ರಮಾಣದ ಲಕ್ಷಣವನ್ನು ಮುಂದೆ ವಿಶೇಷವಾಗಿ ಹೇಳುತ್ತಾನೆ.

**ಅಸಾಧಾರಣಂ ಕಾರಣಂ ಕರಣಮ್ ॥**

ವ್ಯಾಪಾರದಿಂದ ಕೂಡಿದ್ದು ಅಸಾಧಾರಣಕಾರಣವಾಗಿರುವುದು ಕರಣ. ಸಾಮಾನ್ಯಕಾರ್ಯಕ್ಕೆ ಕಾರಣವೆಂದರೆ ಅಸಾಧಾರಣಕಾರಣವಾಗುವುದಿಲ್ಲ. ಸಾಮಾನ್ಯ ಕಾರ್ಯವೆಂದರೆ ಅಲ್ಲಿ ಕಾರ್ಯತ್ವ ರೂಪ ಸಾಮಾನ್ಯ ಧರ್ಮವು ತೋರುತ್ತದೆ. ವಿಶೇಷಧರ್ಮತೋರಿದಲ್ಲಿ ಕಾರಣವಾಗಿರುವುದು ಅಸಾಧಾರಣ ಕಾರಣ. ಘಟವನ್ನು ಕುರಿತು ದಂಡವು ಕರಣ. ಘಟವು ಕಾರ್ಯ. ಇಲ್ಲಿ ಘಟತ್ವರೂಪ ವಿಶೇಷಧರ್ಮವು ತೋರುತ್ತದೆ. ಕಾರ್ಯತ್ವವು ಕಾರ್ಯ ಸಾಮಾನ್ಯದಲ್ಲಿರುವುದರಿಂದ ಅದೂ ಘಟದಲ್ಲಿ ಇವೆ. ಆಗ "ಕಾರ್ಯತ್ವಾತಿರಿಕ್ತ (ಬೇರೆಯಾದ) ಧರ್ಮಾ (ಘಟತ್ವಾದಿ) ವಚ್ಛಿನ್ನ (ಘಟತ್ವದಿಂದ ಕೂಡಿದ ಘಟ) ಕಾರ್ಯತಾನಿರೂಪಿತಕಾರಣತಾಶಾಲಿತ್ವಂ ಅಸಾಧಾರಣತ್ವಂ"ಎಂದು ಲಕ್ಷಣ. ದಂಡವು ಘಟವನ್ನು ಕುರಿತು ಅಸಾಧಾರಣಕಾರಣ. ಕಾರ್ಯತ್ವಕ್ಕಿಂತ ಅತಿರಿಕ್ತ= ಬೇರೆಯಾದ ಧರ್ಮವು ಘಟತ್ವ. ಕಾರ್ಯವು ಘಟ. ಕಾರ್ಯತಾ ಘಟದಲ್ಲಿದೆ. ಘಟದಲ್ಲಿರುವ ಕಾರ್ಯತಾ ಘಟತ್ವಾವಚ್ಛಿನ್ನವಾಗುತ್ತದೆ. ಯಾವ ಧರ್ಮವು ಎಲ್ಲಿ ಅವಚ್ಛೇದಕವಾಗುತ್ತದೋ ಅದು ಅದರಿಂದ ಅವಚ್ಛಿನ್ನವಾಗುತ್ತದೆ ಘಟತ್ವವು ಕಾರ್ಯತೆಯಲ್ಲಿ ಅವಚ್ಛೇದಕವಾದುದರಿಂದ ಕಾರ್ಯತೆಯು ಘಟತ್ವಾವಚ್ಛಿನ್ನವಾಗುತ್ತದೆ. ಈ ಕಾರ್ಯತಾನಿರೂಪಿತಕಾರಣತಾ ದಂಡದಲ್ಲಿದೆ. ಕಾರಣತಾಶಾಲಿತ್ವಂ ದಂಡದಲ್ಲಿದೆ. ಇದರಲ್ಲಿ ಭ್ರಮಣರೂಪ ವ್ಯಾಪಾರವೂ ಇದೆ. 'ವ್ಯಾಪಾರವತ್ವೇ ಸತಿ ಅಸಾಧಾರಣ ಕಾರಣತ್ವಂ' ಎಂಬ ಲಕ್ಷಣವು ಘಟಕ್ಕೆ ಕಾರಣವಾದ ದಂಡದಲ್ಲಿ ಬರುತ್ತದೆ. ಸಾಧಾರಣ ಕಾರಣವೆಂದರೆ ಕೇವಲ ಕಾರ್ಯತ್ವಾವಚ್ಛಿನ್ನ ಕಾರ್ಯತಾನಿರೂಪಿತಾ ಕಾರಣತಾಶಾಲಿಯಾಗಿರುತ್ತದೆ. ಕಾರ್ಯಸಾಮಾನ್ಯವನ್ನು ಕುರಿತು ಈಶ್ವರ, ಅದೃಷ್ಟ ಮುಂತಾದವುಗಳು ಸಾಧಾರಣಕಾರಣ. 'ತಜ್ಜನ್ಯತೇ ಸತಿ ತಜ್ಜನ್ಯಜನಕತ್ವಂ' ವ್ಯಾಪಾರದ ಲಕ್ಷಣ. ದಂಡಕರಣದಲ್ಲಿ ವ್ಯಾಪಾರಇದೆ. ತತ್= ದಂಡ, ತಜ್ಜನ್ಯತ್ವಂ= ದಂಡದಿಂದ ಹುಟ್ಟುವುದರಿಂದ ದಂಡಜನ್ಯತ್ವವು ವ್ಯಾಪಾರದಲ್ಲಿದೆ. ತಜ್ಜನ್ಯ ಜನಕವೂ ಆಗುತ್ತದೆ. ತತ್= ದಂಡ, ತಜ್ಜನ್ಯ ದಂಡದಿಂದ ಹುಟ್ಟಿದ ಘಟ. ಅದಕ್ಕೆ ಜನಕವು

ವ್ಯಾಪಾರವೂ ಆಗುವುದರಿಂದ ತಜ್ಜನ್ಯಜನಕತ್ವ ಧರ್ಮವು ವ್ಯಾಪಾರದಲ್ಲಿ ಇರುತ್ತದೆ.

**ಕಾರ್ಯನಿಯತಪೂರ್ವವೃತ್ತಿ ಕಾರಣಮ್ ॥**

ಕಾರ್ಯವನ್ನು ಕುರಿತು ನಿಯತವಾಗಿ ಪೂರ್ವಕ್ಷಣದಲ್ಲಿರುವುದು ಕಾರಣ. ಘಟವಿದ್ದಲ್ಲಿ ದಂಡವಿದ್ದು ಅದರ ಪೂರ್ವಕ್ಷಣದಲ್ಲಿ ಇದ್ದೇ ಇರುತ್ತದೆ. ಆದುದರಿಂದ ದಂಡವು ಕಾರಣ. ಕಪಾಲವು ಕಾರಣ. 'ನಿಯತತ್ವೇ ಸತಿ ಪೂರ್ವವೃತ್ತಿತ್ವಂ' ಎಂದು ಕಾರಣ ಲಕ್ಷಣ. 'ಕಾರ್ಯಪೂರ್ವವೃತ್ತಿತ್ವಂ' ಇಷ್ಟೇ ಲಕ್ಷಣ ಹೇಳಿದರೆ ಕೆಲವುಕಡೆ ಮಣ್ಣು ಹೊತ್ತು ತರುವುದರಿಂದ ಕತ್ತೆಯೂ ಘಟದ ಪೂರ್ವವೃತ್ತಿಯಾಗುವುದರಿಂದ (ಘಟದ ಹಿಂದಿನ ಕ್ಷಣದಲ್ಲಿರುವುದರಿಂದ) ಘಟವನ್ನು ಕುರಿತು ಕತ್ತೆಯೂ ಕಾರಣವಾಗಬೇಕಾಗುತ್ತದೆ. ಅಲ್ಲಿ ಅತಿವ್ಯಾಪ್ತಿ ವಾರಣೆಗೋಸ್ಕರ 'ನಿಯತತ್ವೇ ಸತಿ' ಎಂದು ಹೇಳಿದೆ. ರಾಸಭ ನಿಯತವಲ್ಲ. ನಿಯತವೆಂದರೆ ವ್ಯಾಪಕ. ಕಾರ್ಯಾಧಿಕರಣದಲ್ಲಿ ಪೂರ್ವಕ್ಷಣದಲ್ಲಿ ನಿಯಮದಿಂದ ಇದ್ದೇ ಇರುವುದು. ಕಾರ್ಯತಾವಚ್ಛೇದಕ ಸಂಬಂಧದಿಂದ (ಸಮವಾಯಾದಿ) ಕಾರ್ಯದ ಅಧಿಕರಣದಲ್ಲಿ ಕಾರ್ಯಪೂರ್ವಕ್ಷಣಾವಚ್ಛೇದದಿಂದ (ಕಾರ್ಯ ಪೂರ್ವಭಾವಿಯಾಗಿ) ಇರುವ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗದಿರುವುದು. ಪ್ರತಿಯೋಗಿತಾವನವಚ್ಛೇದಕ ಧರ್ಮದಿಂದ ಕೂಡಿರುವುದು. ರಾಸಭವು ಪ್ರತಿಯೋಗಿಯೇ ಆಗುತ್ತದೆ. ಎಲ್ಲಾ ಘಟಗಳ ಪೂರ್ವ ಕ್ಷಣದಲ್ಲಿ ಕತ್ತೆ ಇರುವುದಿಲ್ಲ. ಕಾರ್ಯ ಘಟ. ಕಾರ್ಯಾಧಿಕರಣವು ಕಪಾಲ (ಘಟದ ಅವಯವ) ಅಲ್ಲಿ ಪೂರ್ವ ಕ್ಷಣದಲ್ಲಿ ಏನಿಲ್ಲ ? ಕತ್ತೆ ಇಲ್ಲ. ರಾಸಭಾಭಾವ ಇದೆ. ಅಭಾವಕ್ಕೆ ಪ್ರತಿಯೋಗಿ ರಾಸಭ. ಪ್ರತಿಯೋಗಿತಾ ರಾಸಭನಿಷ್ಠಾ. (ರಾಸಭದಲ್ಲಿದೆ) ಪ್ರತಿಯೋಗಿತಾವಚ್ಛೇದಕ ಧರ್ಮವೇ ರಾಸಭತ್ವ ಆಗುತ್ತದೆ. ಅನವಚ್ಛೇದಕವಾಗುವುದಿಲ್ಲ. ಕಪಾಲತ್ವ, ದಂಡತ್ವಗಳು ಅನವಚ್ಛೇದಕಗಳಾಗುವುದರಿಂದ ಅದರಿಂದ ಕೂಡಿದ ಕಪಾಲ ದಂಡಗಳು ಕಾರಣವಾಗುತ್ತವೆ. ಹಾಗಾದರೂ ದಂಡತ್ವ, ದಂಡರೂಪಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ದಂಡತ್ವಾದಿಗಳೂ ಘಟ ನಿಯತ ಪೂರ್ವವೃತ್ತಿಗಳಾಗುತ್ತವೆ. ದಂಡವಿದ್ದಮೇಲೆ ದಂಡತ್ವ ಇದ್ದೇ

ಇದೆಯಷ್ಟೆ. ದಂಡ ಪೂರ್ವದಲ್ಲಿದ್ದರೆ ದಂಡತ್ವವೂ ದಂಡರೂಪವೂ ಪೂರ್ವ ವೃತ್ತಿಯಾಗುತ್ತದೆ. ಆದುದರಿಂದ 'ಅನನ್ಯಥಾಸಿದ್ಧತ್ವೇ ಸತಿ' ಎಂದು ಹೆಚ್ಚು ಸೇರಿಸಬೇಕು. ಅನ್ಯಥಾಸಿದ್ಧವಾಗದಿರುವುದು ಅನನ್ಯಥಾಸಿದ್ಧ. ಅವಶ್ಯಕ್ಲಪ್ತನಿಯತ ಪೂರ್ವವೃತ್ತಿಗಳಾಗಿರುವ ದಂಡಾದಿಗಳಿಂದಲೇ ಘಟಾದಿ ಕಾರ್ಯವಾಗುವಾಗ ದಂಡತ್ವ, ದಂಡರೂಪತ್ವ, ರಾಸಭ ಮುಂತಾದವುಗಳು ಅನ್ಯಥಾಸಿದ್ಧಗಳಾಗುತ್ತವೆ. (ಅತ್ಯಂತಾವಶ್ಯಕತೆ ಇಲ್ಲದಿರುವುದು.)

**ಕಾರ್ಯಂ ಪ್ರಾಗಭಾವಪ್ರತಿಯೋಗಿ ॥**

'ಪ್ರಾಗಭಾವಪ್ರತಿಯೋಗಿತ್ವಂ' ಕಾರ್ಯಲಕ್ಷಣ. ಕಾರ್ಯವಾಗುವ ಮೊದಲು 'ಮುಂದೆ ಘಟವಾಗುವುದು' (ಈಗ ಇಲ್ಲ) ಎಂಬ ಪ್ರತೀತಿಯಲ್ಲಿ ತೋರುವ ಅಭಾವಕ್ಕೆ 'ಪ್ರಾಗಭಾವ' ಎಂದು ಹೆಸರು. (ವಸ್ತುವು ಹುಟ್ಟಬೇಕಾದರೆ ಮೊದಲು ಇರುವ ಅದರ ಅಭಾವ) ಈ ಅಭಾವದಲ್ಲಿ ಪ್ರತಿಯೋಗಿಯಾಗಿ ತೋರುವುದು ಘಟ. ಪ್ರತಿಯೋಗಿತ್ವವು ಘಟದಲ್ಲಿ ಬರುವುದರಿಂದ ಘಟ ಕಾರ್ಯವಾಗುತ್ತದೆ.

**ಕಾರಣ ತ್ರಿವಿಧಂ-ಸಮವಾಯ್ಯಸಮವಾಯಿನಿಮಿತ್ತ ಭೇದಾತ್ ॥**

ಸಮವಾಯಿಕಾರಣ, ಅಸಮವಾಯಿಕಾರಣ, ನಿಮಿತ್ತಕಾರಣ ಎಂದು ಕಾರಣವು ಮೂರು ರೀತಿಯಾಗಿದೆ. ಇವುಗಳ ಲಕ್ಷಣ ಮುಂದೆ ಹೇಳುತ್ತಾನೆ.

**ಯತ್ಸಮವೇತಂ ಕಾರ್ಯಮುತ್ಪದ್ಯತೇ ತತ್ಸಮವಾಯಿ-ಕಾರಣಮ್ । ಯಥಾ ತಂತವಃ ಪಟಸ್ಯ। ಪಟಶ್ಚ ಸ್ವಗತರೂಪಾದೇಃ॥**

ಯಾವುದರಲ್ಲಿ ತಾನು ಸಮವಾಯ ಸಂಬಂಧದಿಂದ ಇದ್ದು ಕಾರ್ಯ ಹುಟ್ಟುತ್ತದೆಯೋ ಅದು ಸಮವಾಯಿಕಾರಣ. ಉದಾಹರಣೆ, ತಂತುಗಳಲ್ಲಿ ಸಮವಾಯ ಸಂಬಂಧದಿಂದ ವಸ್ತ್ರ (ಪಟ) ರೂಪ ಕಾರ್ಯವಿದ್ದು ಹುಟ್ಟುವುದರಿಂದ ಪಟರೂಪಕಾರ್ಯಕ್ಕೆ ತಂತು ಸಮವಾಯಿಕಾರಣ. ಪಟದಲ್ಲಿ ಸಮವಾಯಸಂಬಂಧದಿಂದ ರೂಪಾತ್ಮಕಕಾರ್ಯವಿದ್ದು ಹುಟ್ಟುವುದರಿಂದ ಪಟದ ರೂಪವನುಕುರಿತು ಪಟವು ಸಮವಾಯಿಕಾರಣ. ಇದರ ಸಾಮಾನ್ಯ

ಲಕ್ಷಣ. 'ಸಮವಾಯಸಂಬಂಧಾವಚ್ಛಿನ್ನ ಕಾರ್ಯತಾನಿರೂಪಿತತಾದಾತ್ಮ್ಯಸಂಬಂಧಾವಚ್ಛಿನ್ನ ಕಾರಣತ್ವಂ' ಸಮವಾಯಿ ಕಾರಣತ್ವಮ್. ಕಾರ್ಯವು ಯಾವ ಸಂಬಂಧದಿಂದ ಹುಟ್ಟುತದೋ (ಇರುತ್ತದೋ) ಆಗ ಕಾರ್ಯದಲ್ಲಿ ಇವ ಕಾರ್ಯತಾ ಆ ಸಂಬಂಧದಿಂದ ಅವಚ್ಛಿನ್ನವಾಗಿರುತ್ತದೆ. ಪಟರೂಪ ಕಾರ್ಯವು ತಂತುವಿನಲ್ಲಿ ಸಮವಾಯಸಂಬಂಧದಿಂದ ಇರುವುದರಿಂದ ಪಟನಿಷ್ಠ (ಪಟದಲ್ಲಿರುವ) ಕಾರ್ಯತಾ ಸಮವಾಯಸಂಬಂಧಾವಚ್ಛಿನ್ನಾ ಆಗುತ್ತದೆ. ಯಾವ ಸಂಬಂಧದಿಂದ ಕಾರಣವಾಗುತ್ತದೋ ಆ ಸಂಬಂಧವು ಕಾರಣತಾವಚ್ಛೇದಕ ಸಂಬಂಧವಾಗುತ್ತದೆ. ಕಾರಣತಾ ಆ ಸಂಬಂಧದಿಂದ ಅವಚ್ಛಿನ್ನವಾಗಿರುತ್ತದೆ. ಪ್ರಕೃತ ತಂತು ತಾದಾತ್ಮ್ಯಸಂಬಂಧದಿಂದ ಕಾರಣವಾಗಿರುವುದರಿಂದ ತಂತುನಿಷ್ಠಕಾರಣತಾ ತಾದಾತ್ಮ್ಯಸಂಬಂಧಾವಚ್ಛಿನ್ನಾ ಆಗುತ್ತದೆ. ಸಮವಾಯಸಂಬಂಧಾವಚ್ಛಿನ್ನಕಾರ್ಯತಾನಿರೂಪಿತವೂ ಆಗುತ್ತದೆ. ಕಾರ್ಯತಾನಿರೂಪಿತ ಕಾರಣತಾ ತಂತುವಿನಲ್ಲಿದೆ. ಹೀಗೆಯೇ ಸಮವಾಯದಿಂದ ಘಟವನ್ನು ಕುರಿತು ತಾದಾತ್ಮ್ಯದಿಂದ ಕಪಾಲವು ಸಮವಾಯಿಕಾರಣ. ಸಮವಾಯಸಂಬಂಧಾವಚ್ಛಿನ್ನಕಾರ್ಯತಾ ಘಟದಲ್ಲಿದೆ. ಕಾರ್ಯತಾ ನಿರೂಪಿತ ತಾದಾತ್ಮ್ಯಸಂಬಂಧಾವಚ್ಛಿನ್ನ ಕಾರಣತಾ ಕಪಾಲದಲ್ಲಿದೆ. ಜನ್ಯಭಾವ ಸಾಮಾನ್ಯವನ್ನು ಕುರಿತು ತಾದಾತ್ಮ್ಯದಿಂದ ದ್ರವ್ಯವೇ ಕಾರಣವಾಗುವುದರಿಂದ ಜನ್ಯಭಾವಗಳಾದ ದ್ರವ್ಯ ಗುಣ, ಕರ್ಮಗಳಿಗೆ ದ್ರವ್ಯವೇ ಸಮವಾಯಿಕಾರಣವಾಗಿರುತ್ತದೆ. ದ್ರವ್ಯಕ್ಕೆ ದ್ರವ್ಯದ ಅವಯವಗಳು ಸಮವಾಯಿಕಾರಣ. ಹಾಗೆಯೇ ಗುಣ, ಕರ್ಮಗಳು ದ್ರವ್ಯದಲ್ಲಿ ಸಮವಾಯಸಂಬಂಧದಿಂದ ಇರುವುದರಿಂದ ಅವುಗಳಿಗೆ ದ್ರವ್ಯವೇ ಸಮವಾಯಿಕಾರಣ.

**ಕಾರ್ಯೇಣ, ಕಾರಣೇನ ವಾ ಸಹೈಕಸ್ಮಿನ್ನರ್ಥೇ ಸಮವೇತಂ ಸತ್ ಕಾರಣಂ ಅಸಮವಾಯಿಕಾರಣಮ್ । ಯಥಾ ತಂತುಸಂಯೋಗಃ ಪಟಸ್ಯ । ತಂತುರೂಪಂ ಪಟರೂಪಸ್ಯ ॥**

ಇಲ್ಲಿ ಎರಡು ಲಕ್ಷಣಗಳಿವೆ. 1. ಕಾರ್ಯೇಣ ಸಹ ಏಕಸ್ಮಿನ್ನರ್ಥೇ ಸಮವೇತಂ ಸತ್ಯತ್ ಕಾರಣಂ ತತ್ ಅಸಮವಾಯಿಕಾರಣಮ್.

2. ಕಾರಣೇನ ಸಹ ಏಕಸ್ಮಿನ್ನರ್ಥೇ ಸಮವೇತಂ ಸತ್ ಯತ್ ಕಾರಣಂ ತದಸಮವಾಯಿಕಾರಣಮ್. ಕಾರ್ಯದೊಡನೆ ಒಂದೇ ಅಧಿಕರಣದಲ್ಲಿ ಸಮವಾಯಸಂಬಂಧದಿಂದ ಇದ್ದು ಕಾರಣವಾದದ್ದು ಯಾವುದೋ ಅದು ಒಂದು ಅಸಮವಾಯಿಕಾರಣ. ಪಟವನ್ನು ಕುರಿತು ತಂತುಸಂಯೋಗವು ಈ ಕಾರಣವಾಗುತ್ತದೆ. ಕಾರ್ಯವಾದ ಪಟದೊಡನೆ ಒಂದೇ ಆಶ್ರಯವಾದ ತಂತುಗಳಲ್ಲಿ ಸಮವಾಯ ಸಂಬಂಧದಿಂದ ತಂತುಸಂಯೋಗ ಇದ್ದು ಪಟಕ್ಕೆ ಕಾರಣವಾಗುವುದರಿಂದ ಅಸಮವಾಯಿಕಾರಣ ವಾಗುತ್ತದೆ. ಪಟವೂ ತಂತು ಸಂಯೋಗವೂ ಎರಡೂ ಒಂದೇ ತಂತುರೂಪ ಅಧಿಕರಣದಲ್ಲಿ ಇರುತ್ತವೆ. ಜನ್ಯದ್ರವ್ಯ ಸಾಮಾನ್ಯವನ್ನು ಕುರಿತು ಅವುಗಳ ಅವಯವಸಂಯೋಗ ಕಾರಣ ವಾಗುತ್ತದೆ. ಆದುದರಿಂದ ತಂತುಸಂಯೋಗ ಹೇಳಿದೆ. ಎರಡನೆಯದರಲ್ಲಿ 'ಕಾರಣೇನ ಸಹ' ಎಂಬುದಕ್ಕೆ 'ಸ್ವಕಾರ್ಯಸಮವಾಯಿಕಾರಣೇನ ಸಹ' ಎಂದರ್ಥ. ತನ್ನ ಸಮವಾಯಿಕಾರಣದೊಡನೆ ಒಂದು ಅಧಿಕರಣದಲ್ಲಿ ಸಮವಾಯಸಂಬಂಧದಿಂದ ಇದ್ದು ಯಾವುದು ಕಾರಣವಾಗುತ್ತದೋ ಅದು ಎರಡನೆಯ ಅಸಮವಾಯಿಕಾರಣ. ತಂತುರೂಪವು ಪಟರೂಪಕ್ಕೆ ಅಸಮ ವಾಯಿಕಾರಣ. ಸಮನ್ವಯ. ಸ್ವ= ತಂತುರೂಪ. ಸ್ವಕಾರ್ಯ= ಪಟರೂಪ ಅದರ ಸಮವಾಯಿಕಾರಣ= ಪಟ. ಅದರೊಡನೆ (ಸ್ವಸಮವಾಯಿ= ತಂತು ಅಲ್ಲಿ ಸಮವೇತವಾಗಿ ಸಮವಾಯದಿಂದ ಇದ್ದು) ಒಂದೇ ಅಧಿಕರಣ ಅಂದರೆ ತಂತು. ಅಲ್ಲಿ ಸಮವಾಯ ಸಂಬಂಧದಿಂದ ತಂತುರೂಪ ಇದ್ದು ಪಟರೂಪಕ್ಕೆ ಕಾರಣವಾಗುವುದರಿಂದ ಅಸಮವಾಯಿಕಾರಣವಾಗುತ್ತದೆ. ಇದಕ್ಕೆ ಸಾಮಾನ್ಯಲಕ್ಷಣ ಹೀಗೆ ಹೇಳುತ್ತಾರೆ. 1. ಸಮವಾಯಸಂಬಂಧಾವ ಚ್ಛಿನ್ನಕಾರ್ಯತಾ ನಿರೂಪಿತ ಸಮವಾಯಸಂಬಂಧಾವಚ್ಛಿನ್ನಕಾರಣತಾಶ್ರಯ ತ್ವಮ್. ಸಮವಾಯದಿಂದ ಕಾರ್ಯವನ್ನು ಕುರಿತು ಸಮವಾಯದಿಂದ ಕಾರಣವಾಗುವುದರಿಂದ ಕಾರ್ಯದಲ್ಲಿರುವ ಕಾರ್ಯತಾ. ಕಾರಣದಲ್ಲಿರುವ ಕಾರಣತಾ ಸಮವಾಯಸಂಬಂಧಾವಚ್ಛಿನ್ನವಾಗುತ್ತದೆ. ಕಾರ್ಯತಾನಿರೂಪಿ ತತ್ವ ಕಾರಣದಲ್ಲಿದೆ. ಸಮವಾಯಸಂಬಂಧಾವಚ್ಛಿನ್ನಾ ಯಾ ಕಾರ್ಯತಾ= ಘಟನಿಷ್ಠಾ ಘಟತ್ವಾವಚ್ಛಿನ್ನಾಕಾರ್ಯತಾ (ಘಟ ತನ್ನ ಅವಯವಗಳಾದ ಕಪಾ ಲದ್ವಯಗಳಲ್ಲಿ ಸಮವಾಯಸಂಬಂಧದಿಂದ ಉಂಟಾಗುತ್ತದೆ.) ಕಾರ್ಯತಾ

ನಿರೂಪಿತಾ ಯಾ ಸಮವಾಯಸಂಬಂಧಾವಚ್ಛಿನ್ನಾ ಕಾರಣತಾ= ಕಪಾಲ ದ್ವಯ (ಎರಡು ಘಟದ ಅವಯವ) ಸಂಯೋಗ ನಿಷ್ಠಾಕಾರಣತಾ (ಇದು ಸಮವಾಯದಿಂದ ಕಪಾಲದ್ವಯಗಳಲ್ಲಿರುವುದರಿಂದ ಸಮವಾಯ ಸಂಬಂಧಾವ ಚ್ಛಿನ್ನವಾಗಿರುತ್ತದೆ.) ತದಾಶ್ರಯತ್ವ ಕಪಾಲದ್ವಯಸಂಯೋಗದಲ್ಲಿ ಬರುತ್ತದೆ. ಹಾಗೆಯೇ ಆದ್ಯಪತನ ಕ್ರಿಯೆಗೆ, ಆದ್ಯಸ್ಯಂದನ ಕ್ರಿಯೆಗೆ ಕ್ರಮ ವಾಗಿ ಗುರುತ್ವ, ದ್ರವತ್ವ ಅಸಮವಾಯಿಕಾರಣವಾಗಿರುತ್ತವೆ. ಸಮವಾಯ ಸಂಬಂಧಾವಚ್ಛಿನ್ನಾದ್ಯಪತನಕ್ರಿಯಾತ್ವಚ್ಛಿನ್ನ ಕಾರ್ಯತಾನಿರೂಪಿತ ಸಮ ವಾಯಸಂಬಂಧಾವಚ್ಛಿನ್ನಕಾರಣತಾಶ್ರಯತ್ವವು ಗುರುತ್ವದಲ್ಲಿ ಬರುತ್ತದೆ. ಇನ್ನೊಂದು ಹೀಗೆಯೇ ತಿಳಿಯಬೇಕು. ಆದ್ಯಪತನ, ಆದ್ಯಸ್ಯಂದನ (ಹರಿಯು ವುದು) ಗಳಿಗೆ ಕ್ರಮವಾಗಿ ಸಮವಾಯಸಂಬಂಧದಿಂದ ಗುರುತ್ವ, ದ್ರವತ್ವ ಗುಣಗಳು ಕಾರಣವಾಗುತ್ತವೆ. 2. ಸಮವಾಯಸಂಬಂಧಾವಚ್ಛಿನ್ನ ಕಾರ್ಯತಾನಿರೂಪಿತ ಸ್ವಸಮವಾಯಿ ಸಮವೇತತ್ವ ಸಂಬಂಧಾವಚ್ಛಿನ್ನ ಕಾರಣತಾಶ್ರಯತ್ವಮ್. ಸಮವಾಯಿ ಸಂಬಂಧದಿಂದ ಪಟರೂಪವನ್ನು ಕುರಿತು ಸ್ವಸಮವಾಯಿ ಸಮವೇತತ್ವ ಸಂಬಂಧದಿಂದ ತಂತುರೂಪ ಅಸಮ ವಾಯಿಕಾರಣ. ಸ್ವ= ತಂತುರೂಪ. ಸ್ವಸಮವಾಯಿ= ತಂತು. ಅಲ್ಲಿ ಸಮವೇತ= ಸಮವಾಯದಿಂದ, ತಂತುರೂಪ ಇದೆ. ಸಮವಾಯ ಸಂಬಂಧಾವ ಚ್ಛಿನ್ನಾ ಯಾ ಕಾರ್ಯತಾ ಪಟರೂಪತ್ವಾವಚ್ಛಿನ್ನಾ ಕಾರ್ಯತಾ, ಕಾರ್ಯತಾ ನಿರೂಪಿತಾ ಯಾ ಸ್ವಸಮವಾಯಿಸಮವೇತತ್ವ ಸಂಬಂಧಾವಚ್ಛಿನ್ನಾ ಕಾರ ಣತಾ ತಂತುರೂಪನಿಷ್ಠಾಕಾರಣತಾ, ತದಾಶ್ರಯತ್ವವು ತಂತುರೂಪದಲ್ಲಿ ಬರುವುದರಿಂದ ಲಕ್ಷಣಸಮನ್ವಯ ಆಗುತ್ತದೆ.

**ತದುಭಯಭಿನ್ನಂ ಕಾರಣಂ ನಿಮಿತ್ತಕಾರಣಮ್ । ಯಥಾ ತುರೀವೇಮಾದಿಕಂ ಪಟಸ್ಯ ॥**

ಈ ಸಮವಾಯಿಕಾರಣ, ಅಸಮವಾಯಿಕಾರಣಗಳಿಗಿಂತ ಬೇರೆಯಾದ ಕಾರಣವು ನಿಮಿತ್ತಕಾರಣವಾಗುತ್ತವೆ. 'ಸಮವಾಯಿಕಾರಣ ಭಿನ್ನತ್ವೇ ಸತಿ ಅಸಮವಾಯಿಕಾರಣ ಭಿನ್ನತ್ವೇ ಸತಿ ಕಾರಣತ್ವಂ' ನಿಮಿತ್ತಕಾರಣದ ಲಕ್ಷಣ ತುರೀವೇಮಾ ಮುಂತಾದವುಗಳು (ನೂಲುನೇಯುವ ಕೊಳವಿ) ಪಟವನ್ನು ಕುರಿತು ನಿಮಿತ್ತಕಾರಣವಾಗುತ್ತವೆ.

**ತದೇತ್ತ್ರಿವಿಧಕಾರಣಮಧ್ಯೇ ಯದಸಾಧಾರಣಂ ಕಾರಣಂ ತದೇವ ಕರಣಮ್ ॥**

ಈ ಮೂರು ಕಾರಣಗಳ ಮಧ್ಯದಲ್ಲಿ ಯಾವುದು ಅಸಾಧಾರಣ ಕಾರಣವೋ ಅದು ಕರಣವಾಗುತ್ತದೆ. 'ವ್ಯಾಪಾರವತ್ತ್ವೇ ಸತಿ' ಎಂದು ಹೆಚ್ಚಾಗಿ ಸೇರಿಸಬೇಕು. ವಿಶೇಷಧರ್ಮದಿಂದ ಕೂಡಿದ ಕಾರ್ಯಕ್ಕೆ ಕಾರಣ ವಾಗಿರುವುವೇ ಅಸಾಧಾರಣಕಾರಣ ಎಂದು ಹಿಂದೆ ಹೇಳಿದೆ. ಸಾಮಾನ್ಯ ಧರ್ಮ (ಕಾರ್ಯತ್ವ)ದಿಂದ ಕೂಡಿದ ಕಾರ್ಯಕ್ಕೆ ಕಾರಣವೆಂದರೆ ಸಾಧಾರಣ ಕಾರಣವಾಗುತ್ತದೆ. ಕಪಾಲಸಂಯೋಗಾದಿಗಳೂ ಘಟತ್ವಾವಚ್ಛಿನ್ನ ಘಟ ವನ್ನು ಕುರಿತು ಕಾರಣವಾಗುವುದರಿಂದ ಅಲ್ಲಿ ಅತಿವ್ಯಾಪ್ತಿನಿವಾರಣೆ ಮಾಡಲು 'ವ್ಯಾಪಾರವತ್ತ್ವೇ ಸತಿ' ಎನ್ನಬೇಕು. ಕಪಾಲಸಂಯೋಗಾದಿಗಳಲ್ಲಿ ವ್ಯಾಪಾರ ವಿಲ್ಲ. 'ತಜ್ಜನ್ಯತ್ವೇ ಸತಿ ತಜ್ಜನ್ಯಜನಕತ್ವಂ' ಎಂದು ವ್ಯಾಪಾರಲಕ್ಷಣ ಹಿಂದೆ ಹೇಳಿದೆ. ಅದು ದಂಡಾದಿಗಳಲ್ಲಿಯೇ ಬರುವುದರಿಂದ ದಂಡಾದಿಗಳು ಘಟಕ್ಕೆ ಅಸಾಧಾರಣ ಕಾರಣ. ಕಪಾಲಸಂಯೋಗ ವ್ಯಾಪಾರವಾಗುತ್ತದೆ. ಕಪಾಲ ಜನ್ಯವಾಗಿ ಕಪಾಲಜನ್ಯಘಟ ಜನಕ (ಕಪಾಲದಿಂದ ಹುಟ್ಟಿದ ಘಟಕ್ಕೆ ಕಾರಣ) ವಾಗುವುದರಿಂದ ಅದರಲ್ಲಿ ವ್ಯಾಪಾರಲಕ್ಷಣ ಬರುತ್ತದೆ. ಈಶ್ವರ ಅದೃಷ್ಟಾದಿಗಳಲ್ಲಿ ಅತಿವ್ಯಾಪ್ತಿವಾರಣೆಗೋಸ್ಕರ ಅಸಾಧಾರಣತ್ವವಿಶೇಷಣ ಹೇಳಬೇಕು.

**ತತ್ರ ಪ್ರತ್ಯಕ್ಷಜ್ಞಾನಕರಣಂ ಪ್ರತ್ಯಕ್ಷಮ್ ॥**

ಆರು ಇಂದ್ರಿಯರೂಪವಾದ ಪ್ರಮಾಣದ ಲಕ್ಷಣ ಹೇಳುತ್ತಾನೆ. ನಾಲ್ಕು ಪ್ರಮಾಣಜ್ಞಾನಗಳ ಮಧ್ಯದಲ್ಲಿ ಪ್ರತ್ಯಕ್ಷಜ್ಞಾನಕ್ಕೆ ಅಸಾಧಾರಣ ಕಾರಣವಾದದ್ದು ಪ್ರತ್ಯಕ್ಷಪ್ರಮಾಣ. ನಾಲ್ಕು ಪ್ರಮಾತ್ಮಕ ಜ್ಞಾನಗಳಲ್ಲಿ ಪ್ರತ್ಯಕ್ಷಜ್ಞಾನವನ್ನು ಹುಟ್ಟಿಸುವುದು ಪ್ರತ್ಯಕ್ಷಪ್ರಮಾಣ. ಕಣ್ಣು ಮುಂತಾದ ಇಂದ್ರಿಯಗಳಿಂದುಂಟಾದ ಪ್ರತ್ಯಕ್ಷಜ್ಞಾನವನ್ನು ಕುರಿತು ವ್ಯಾಪಾರದಿಂದಕೂಡಿ ಅಸಾಧಾರಣ ಕಾರಣವಾಗಿರುವುದರಿಂದ ಪ್ರತ್ಯಕ್ಷಪ್ರಮಾಣ ಕಾರಣವಾಗುತ್ತದೆ ಇದು ಆಯಾಯ ಇಂದ್ರಿಯವೇ ಆಗಿರುತ್ತದೆ. ಇಂದ್ರಿಯಗಳಿಂದಲೇ ಪ್ರತ್ಯಕ್ಷ ಜ್ಞಾನವಾಗುತ್ತದೆ. 'ಪ್ರತ್ಯಕ್ಷಜ್ಞಾನಕರಣತ್ವಂ' ಸಾಮಾನ್ಯಲಕ್ಷಣ.

ಬಾಹ್ಯಪ್ರತ್ಯಕ್ಷ ಜ್ಞಾನವುಂಟಾಗುವಾಗ ಇಂದ್ರಿಯಮನಸ್ಸುಗಳ ಸಂಯೋಗವೇ ಇಂದ್ರಿಯದ ವ್ಯಾಪಾರವಾಗುತ್ತದೆ. ಸಂಯೋಗಾದಿ ಸಂನ್ನಿಕರ್ಷಗಳಲ್ಲಿ ಸಂಯೋಗ ಒಂದಕ್ಕೆ ವ್ಯಾಪಾರತ್ವ ಕೂಡಿದರೂ ಸಂಯುಕ್ತಸಮವಾಯಾದಿ ಗಳು ಸಮವಾಯರೂಪವಾದುದರಿಂದ ಅವುಗಳಿಗೆ ಇಂದ್ರಿಯಜನ್ಯತ್ವವು ಸಂಭವಿಸದಿರುವುದರಿಂದ ವ್ಯಾಪಾರಲಕ್ಷಣ ಅಲ್ಲಿ ಬರುವುದಿಲ್ಲ. ಮಾನಸ ಪ್ರತ್ಯಕ್ಷದಲ್ಲಿ ಆತ್ಮಮನಃ ಸಂಯೋಗವೇ ವ್ಯಾಪಾರವಾಗುತ್ತದೆ.

**(ಜ್ಞಾನಾಕರಣಕಂ ಜ್ಞಾನಂ ಪ್ರತ್ಯಕ್ಷಮ್) ಇಂದ್ರಿಯಾರ್ಥಸಂನಿಕರ್ಷಜನ್ಯಂ ಜ್ಞಾನಂ ಪ್ರತ್ಯಕ್ಷಮ್ । ತದ್ದ್ವಿವಿಧಮ್–ನಿರ್ವಿಕಲ್ಪಕಂ ಸವಿಕಲ್ಪಕಂ ಚೇತಿ ॥**

(ಪ್ರತ್ಯಕ್ಷಪ್ರಮಾಣಲಕ್ಷಣವನ್ನು ಹೇಳಿ ಈಗ ಪ್ರತ್ಯಕ್ಷರೂಪ ಪ್ರಮಾತ್ಮಕ ಜ್ಞಾನಲಕ್ಷಣವನ್ನು ಹೇಳುತ್ತಾನೆ. ಪ್ರತ್ಯಕ್ಷ ಎಂಬುದು ಪ್ರಮಾಣವನ್ನೂ ಹೇಳುತ್ತದೆ. ಪ್ರಮೆಯನ್ನೂ ಹೇಳುತ್ತದೆ. (ಕುಂಡಲಿಯಲ್ಲಿರುವುದು ಪ್ರಕ್ಷಿಪ್ತ ಲಕ್ಷಣ.) ಜ್ಞಾನ ಕರಣವಾಗದಿರುವ ಜ್ಞಾನ ಪ್ರತ್ಯಕ್ಷಪ್ರಮಾತ್ಮಕಜ್ಞಾನ. ಜ್ಞಾನಂ ಕರಣಂ ಯಸ್ಯತತ್ ಜ್ಞಾನಕರಣಕಂ. ತತ್ ನ ಭವತೀತಿ ಜ್ಞಾನಾ ಕರಣಕಮ್. ವ್ಯಾಪ್ತಿಜ್ಞಾನವೇ ಕರಣವಾಗಿರುವ ಜ್ಞಾನ ಅನುಮಿತಿಜ್ಞಾನ. ಸಾದೃಶ್ಯಜ್ಞಾನವೇ ಕರಣವಾಗಿರುವುದು ಉಪಮಿತಿಜ್ಞಾನ. ಪದಜ್ಞಾನವೇ ಕಾರಣವಾಗಿರುವ ಜ್ಞಾನ ಶಾಬ್ದಜ್ಞಾನ. ಜ್ಞಾನಕರಣವಾಗದಿರುವ ಜ್ಞಾನ ಪ್ರತ್ಯಕ್ಷಜ್ಞಾನ. ಇದಕ್ಕೆ ಇಂದ್ರಿಯಗಳು ಕರಣ. ಜ್ಞಾನಾಕರಣಕ ಜ್ಞಾನ ವೆಂದರೆ ಈಶ್ವರಪ್ರತ್ಯಕ್ಷವೂ ಆಗುತ್ತದೆ. ಈಶ್ವರಪ್ರತ್ಯಕ್ಷ ಜನ್ಯವಲ್ಲ. ಆದುದರಿಂದ ಮುಂದಿನ ಲಕ್ಷಣ ಅಲ್ಲಿ ಕೂಡುವುದಿಲ್ಲ.) ಇಂದ್ರಿಯ= ಕಣ್ಣು ಮುಂತಾದವುಗಳು ಅರ್ಥ= ಘಟಪಟಾದಿಗಳು ಇವುಗಳ ಸಂನ್ನಿಕರ್ಷ–ಎಂದರೆ ಸಂಯೋಗ, ಇವರಿಂದ ಉಂಟಾಗುವ ಜ್ಞಾನವೇ ಪ್ರತ್ಯಕ್ಷಜ್ಞಾನ. ಕಣ್ಣು ವಸ್ತುವಿನೊಡನೆ ಸಂಯುಕ್ತವಾದರೇ ಚಾಕ್ಷುಷಪ್ರತ್ಯಕ್ಷವಾಗುತ್ತದೆ. ರಸನ ಪೆಲ್ಲಕ್ಕೆ ಸಂಯೋಗವಾದರೆ 'ಇದು ಸಿಹಿ' ಎಂಬ ಪ್ರತ್ಯಕ್ಷವುಂಟಾಗುತ್ತದೆ. ಹೀಗೆ ಇತರ ಇಂದ್ರಿಯಗಳೂ ಪದಾರ್ಥಸಂಯೋಗದಿಂದ ಜ್ಞಾನವನ್ನು ಹುಟ್ಟಿಸುತ್ತವೆ. ಜನ್ಯಪ್ರತ್ಯಕ್ಷವೇ ಲಕ್ಷ್ಯವೆಂಬ ಅಭಿಪ್ರಾಯದಿಂದ ಈ ಲಕ್ಷಣ

ಹೇಳಿದೆ. ಹಿಂದಿನ ಲಕ್ಷಣ ಜನ್ಯ ಅಜನ್ಯ ಪ್ರತ್ಯಕ್ಷ ಸಾಧಾರಣವಾಗುತ್ತದೆ. ಈಶ್ವರಪ್ರತ್ಯಕ್ಷ ಜನ್ಯವೇ ಅಲ್ಲವಾದುದರಿಂದ ಯಾವ ಕರಣದಿಂದಲೂ ಹುಟ್ಟುವುದಿಲ್ಲ. ನಮ್ಮ ಪ್ರತ್ಯಕ್ಷ ಜ್ಞಾನಕರಣಕವಲ್ಲ. ಇಂದ್ರಿಯಕರಣಕ ವಾಗಿದೆ. (ನಿರ್ವಿಕಲ್ಪಕಪ್ರತ್ಯಕ್ಷ, ಸವಿಕಲ್ಪಕಪ್ರತ್ಯಕ್ಷವೆಂದು) ಪ್ರತ್ಯಕ್ಷ ಪ್ರಮಾತ್ಮಕಜ್ಞಾನವು ಎರಡು ವಿಧ.

**ಅತ್ರ ನಿಷ್ಪ್ರಕಾರಂ ಜ್ಞಾನಂ ನಿರ್ವಿಕಲ್ಪಕಮ್ ॥**

ಸವಿಕಲ್ಪಕ ನಿರ್ವಿಕಲ್ಪಕಗಳಲ್ಲಿ ಪ್ರಕಾರ (= ವಿಶೇಷಣ) ತೋರದಿರುವ ಜ್ಞಾನ ನಿರ್ವಿಕಲ್ಪಕವಾಗುತ್ತದೆ. 'ಪ್ರಕಾರತಾಶೂನ್ಯ ಜ್ಞಾನತ್ವಂ' ಎಂದು ಲಕ್ಷಣ. ಸಾಮಾನ್ಯ ಜ್ಞಾನದಲ್ಲಿ ಒಂದು ವಿಶೇಷ್ಯ, ಒಂದು ವಿಶೇಷಣ, ಇವುಗಳ ಸಂಬಂಧ (ಸಂಸರ್ಗ) ಈ ಮೂರು ಇರುತ್ತವೆ. ಜ್ಞಾನವು ವಿಶೇಷ್ಯತಾಶಾಲಿ, ಪ್ರಕಾರತಾಶಾಲಿ, ಸಂಸರ್ಗತಾಶಾಲಿಯಾಗಿರುತ್ತದೆ. ಇವುಗಳಲ್ಲಿ ಯಾವುದೂ ಯಾವ ಜ್ಞಾನದಲ್ಲಿ ತೋರುವುದಿಲ್ಲವೋ ಅದು ನಿರ್ವಿಕಲ್ಪಕ. 'ತ್ರಿವಿಧವಿಷಯತಾ ಶೂನ್ಯತ್ವಂ' ಎಂದೂ ಲಕ್ಷಣವಾಗುತ್ತದೆ. ಮುಂದೆ ಉಂಟಾಗುವ ವಿಶಿಷ್ಟಜ್ಞಾನಕ್ಕೋಸ್ಕರ ವಿಶೇಷಣ ಜ್ಞಾನರೂಪವಾಗಿ ಇದನ್ನು ಸ್ವೀಕರಿಸುತ್ತಾರೆ. ಆದುದರಿಂದ ನಿರ್ವಿಕಲ್ಪಕಜ್ಞಾನವಿದೆಯೆಂಬುದರಲ್ಲಿ ಅನುಮಾನವೇ ಪ್ರಮಾಣ. ಇದರಲ್ಲಿ ಹಿಂದೆ ಹೇಳಿದ ಮೂರುವಿಧ ವಿಷಯತಾ ಅತಿರಿಕ್ತವಾಗಿ ನಾಲ್ಕನೆಯ ವಿಲಕ್ಷಣವಿಷಯತಾವನ್ನು ಕೆಲವರು ಒಪ್ಪುತ್ತಾರೆ.

**ಸಪ್ರಕಾರಕಂ ಜ್ಞಾನಂ ಸವಿಕಲ್ಪಕಮ್ । ಯಥಾ ಡಿತ್ಥೋಽಯಂ ಬ್ರಾಹ್ಮಣೋಽಯಂ, ಶ್ಯಾಮೋಽಯಮಿತಿ ॥**

ಸವಿಕಲ್ಪಕಲಕ್ಷಣ ಹೇಳುತ್ತಾನೆ. 'ವಿಷಯತಾ ನಿರೂಪಕತ್ವಂ' ಸವಿಕಲ್ಪಕದಲಕ್ಷಣ. ಜ್ಞಾನದಿಂದ ನಿರೂಪಿತವಾದದ್ದು ವಿಷಯತಾ. ವಿಷಯತಾ ನಿರೂಪಕ= ಜ್ಞಾನ. ಘಟಾದಿಗಳು ಜ್ಞಾನಕ್ಕೆ ವಿಷಯ. ಜ್ಞಾನ ವಿಷಯೀ. ವಿಷಯತಾ ಘಟಾದಿವಿಷಯಗಳಲ್ಲಿ ಇದೆ. ಇದಕ್ಕೆ ನಿರೂಪಕ ಜ್ಞಾನ. ಈ ಜ್ಞಾನದಲ್ಲಿ ವಿಶೇಷ್ಯತಾ ನಿರೂಪಕತ್ವ, ಪ್ರಕಾರತಾನಿರೂಪಕತ್ವ, ಸಂಸರ್ಗತಾ ನಿರೂಪಕತ್ವ, ಈ ಮೂರೂ ಇರುತ್ತವೆ. ಉದಾ :—'ಅಯಂ ಡಿತ್ಥಃ' ಇದಂ

ಪದಾರ್ಥವೇ (ಎದುರಿಗೆ ತೋರುವ ವ್ಯಕ್ತಿ) ವಿಶೇಷ್ಯ. ಡಿತ್ಥತ್ವವೇ ಪ್ರಕಾರ ಆದುದರಿಂದ ಇದಂತ್ವಾವಚ್ಛಿನ್ನ ವಿಶೇಷ್ಯತಾನಿರೂಪಿತ ಡಿತ್ಥತ್ವ ಪ್ರಕಾರತಾ ಶಾಲಿಯಾದುದರಿಂದ ಸವಿಕಲ್ಪಕವಾಗುತ್ತದೆ. ನಾಮ, ಜಾತಿ, ಗುಣ ಮುಂತಾದ ವಿಶೇಷಣಾವಗಾಹಿ (ವಿಶೇಷಣಗಳನ್ನು ಗ್ರಹಿಸುವ) ಜ್ಞಾನವೇ ಸವಿಕಲ್ಪಕ. 'ಬ್ರಾಹ್ಮಣೋऽಯಂ' ಎಂಬಲ್ಲಿ ಜಾತಿಯು ಪ್ರಕಾರ. 'ಡಿತ್ಥೋऽಯಂ' ಎಂಬಲ್ಲಿ ನಾಮವು ಪ್ರಕಾರ. 'ಶ್ಯಾಮೋऽಯಂ' ಎಂಬಲ್ಲಿ ಗುಣವು ಪ್ರಕಾರ. 'ಪಾಚಕೋऽಯಂ' ಎಂಬಲ್ಲಿ ಕ್ರಿಯಾಪ್ರಕಾರ.

**ಪ್ರತ್ಯಕ್ಷಜ್ಞಾನಹೇತುರಿಂದ್ರಿಯಾರ್ಥಸಂನಿಕರ್ಷಃ ಷಡ್ವಿಧಃ— ಸಂಯೋಗಃ, ಸಂಯುಕ್ತಸಮವಾಯಃ, ಸಂಯುಕ್ತಸಮವೇತ ಸಮವಾಯಃ, ಸಮವಾಯಃ, ಸಮವೇತಸಮವಾಯಃ ವಿಶೇಷಣ ವಿಶೇಷ್ಯಭಾವಶ್ಚೇತಿ ||**

ಚಾಕ್ಷುಷ, ರಾಸನ, ಸ್ಪಾರ್ಶ, ಶ್ರಾವಣ, ಘ್ರಾಣ ಮಾನಸರೂಪಗಳಾದ ಆರು ಪ್ರತ್ಯಕ್ಷಜ್ಞಾನಕ್ಕೆ ಕಾರಣವಾಗಿರುವ ಆರು ವಿಧವಾದ ಸಂನ್ನಿಕರ್ಷ (ಸಂಬಂಧ) ವನ್ನು ತೋರಿಸುತ್ತಾನೆ. 1) 'ದ್ರವ್ಯವೃತ್ತಿ ಲೌಕಿಕ ವಿಷಯತಾ ಸಂಬಂಧೇನ ಚಾಕ್ಷುಷತ್ವಾವಚ್ಛಿನ್ನಂಪ್ರತಿ ಚಕ್ಷುಃಸಂಯೋಗಃ ಕಾರಣಮ್' ಕಣ್ಣಿನಿಂದ ವಸ್ತು ಪ್ರತ್ಯಕ್ಷವಾಗಬೇಕಾದರೆವಸ್ತುವಿಗೆ ಚಕ್ಷುಃ ಸಂಯೋಗ ಆಗ ಬೇಕು. ದ್ರವ್ಯದಲ್ಲಿ ವಿಷಯತಾ ಇದೆ. ವಿಷಯತಾ ಸಂಬಂಧದಿಂದ ಚಕ್ಷುಃ ಸಂಯೋಗವೇ ಕಾರಣ 2) 'ದ್ರವ್ಯಸಮವೇತವೃತ್ತಿ ಲೌಕಿಕವಿಷಯತಾಸಂಬಂ ಧೇನ ಚಾಕ್ಷುಷತ್ವಾವಚ್ಛಿನ್ನಂ ಪ್ರತಿ ಚಕ್ಷುಃಸಂಯುಕ್ತಸಮವಾಯಸ್ಯ ಹೇತು ತ್ವಮ್. ದ್ರವ್ಯದಲ್ಲಿಸಮವಾಯ ಸಂಬಂಧದಿಂದಇರುವ ರೂಪಾದಿಗಳಚಾಕ್ಷುಷ ಪ್ರತ್ಯಕ್ಷಕ್ಕೆಚಕ್ಷುಃ ಸಂಯುಕ್ತ ಸಮವಾಯವು ಸನ್ನಿಕರ್ಷವಾಗುತ್ತದೆ. ಚಕ್ಷುಃ ಸಂಯುಕ್ತ =ಘಟಾದಿ. ಅಲ್ಲಿ ರೂಪಸಮವಾಯದಿಂದ ಇದೆ. 3) 'ದ್ರವ್ಯಸಮ ವೇತ ಸಮವೇತವೃತ್ತಿ ಲೌಕಿಕ ವಿಷಯತಾ ಸಂಬಂಧೇನ ಚಾಕ್ಷುಷತ್ವಾವ ಚ್ಛಿನ್ನಂ ಪ್ರತಿ ಚಕ್ಷುಃಸಂಯುಕ್ತಸಮವೇತ ಸಮವಾಯಸ್ಯ ಹೇತುತ್ವಮ್' ದ್ರವ್ಯ ಸಮವೇತ (ದ್ರವ್ಯದಲ್ಲಿ ಸಮವಾಯದಿಂದ ಇರುವುದು) ರೂಪಾದಿ. ಅಲ್ಲಿ ಸಮವೇತ = ಸಮವಾಯದಿಂದ ಇರುವುದು ರೂಪತ್ವಾದಿ. ರೂಪತ್ವಾದಿಗಳ

ಚಾಕ್ಷುಷಪ್ರತ್ಯಕ್ಷಕ್ಕೆ ಚಕ್ಷುಃ ಸಂಯುಕ್ತ ಸಮವೇತ ಸಮವಾಯವು ಸನ್ನಿಕರ್ಷ. ಚಕ್ಷುಃ ಸಂಯುಕ್ತ= ಘಟ. ಅಲ್ಲಿ ಸಮವೇತ (ಸಮವಾಯದಿಂದ ಇರುವುದು) ರೂಪ. ಅಲ್ಲಿ ಸಮವಾಯದಿಂದ ರೂಪತ್ವ ಇದೆ. ಕಣ್ಣು, ತ್ವಕ್ (ಚರ್ಮ) ಮನಸ್ಸು ಈ ಮೂರೇ ದ್ರವ್ಯಪ್ರತ್ಯಕ್ಷ ಜನಕಗಳಾಗಿವೆ. ಉಳಿದ ಘ್ರಾಣ (ಮೂಗು) ರಸನ (ನಾಲಿಗೆ) ಶ್ರೋತ್ರ (ಕಿವಿ) ಮೂರು ಇಂದ್ರಿಯಗಳು ಗುಣಗ್ರಾಹಕಗಳು. ಗುಣವಿಷಯಕ ಪ್ರತ್ಯಕ್ಷಜನಕಗಳು. ಚಾಕ್ಷುಷದಲ್ಲಿ ಹೇಳಿದಂತೆಯೇ ತ್ವಗಿಂದ್ರಿಯಸ್ಥಳದಲ್ಲಿಯೂ ಮೂರು ವಿಧವಾಗಿ 'ಹೇಳಬೇಕು. 1. ದ್ರವ್ಯವೃತ್ತಿಲೌಕಿಕ ವಿಷಯತಾಸಂಬಂಧೇನ ತ್ವಾಚಪ್ರತ್ಯಕ್ಷತ್ವಾವಚ್ಛಿನ್ನಂ ಪ್ರತಿ ತ್ವಕ್‌ಸಂಯೋಗಸ್ಯ ಹೇತುತಾ.' ದ್ರವ್ಯತ್ವಾಚಪ್ರತ್ಯಕ್ಷದಲ್ಲಿ ತ್ವಕ್ ಸಂಯೋಗವು ಸನ್ನಿಕರ್ಷ ಎಂದರ್ಥ. 2. ದ್ರವ್ಯಸಮವೇತ, ತ್ವಾಚಪ್ರತ್ಯಕ್ಷತ್ವಾವಚ್ಛಿನ್ನಂ ಪ್ರತಿ ತ್ವಕ್‌ಸಂಯುಕ್ತ ಸಮವಾಯಸ್ಯ ಹೇತುತ್ವಮ್.' ದ್ರವ್ಯಸಮವೇತ (ದ್ರವ್ಯದಲ್ಲಿ ಸಮವಾಯ ಸಂಬಂಧದಿಂದ ಇರುವ) ಉಷ್ಣಾದಿ ವಿಷಯಕತ್ವಾಚ ಪ್ರತ್ಯಕ್ಷದಲ್ಲಿ ತ್ವಕ್‌ಸಂಯುಕ್ತ ಸಮವಾಯ ಸಂನಿಕರ್ಷ. 3. 'ದ್ರವ್ಯಸಮವೇತ ಸಮವೇತೋಷ್ಣತ್ವ (ದ್ರವ್ಯಸಮವೇತ= ಉಷ್ಣ. ಅಲ್ಲಿ ಸಮವೇತ= ಉಷ್ಣತ್ವ) ಶೀತತ್ವಾದಿ ಜಾತಿಸ್ಪಾರ್ಶನ ಪ್ರತ್ಯಕ್ಷೇ ತ್ವಕ್ ಸಂಯುಕ್ತ ಸಮವೇತಸಮವಾಯಸ್ಯ ಹೇತುತಾ.' ಉಷ್ಣತ್ವ ಶೀತತ್ವಾದಿಗಳ ತ್ವಾಚಪ್ರತ್ಯಕ್ಷದಲ್ಲಿ ತ್ವಕ್‌ಸಂಯುಕ್ತ ಸಮವೇತ ಸಮವಾಯವು ಸಂನಿಕರ್ಷ. ಹೀಗೆಯೇ ಆತ್ಮಮಾನಸ ಪ್ರತ್ಯಕ್ಷದಲ್ಲಿ ಮನಃ ಸಂಯೋಗರೂಪ ಸನ್ನಿಕರ್ಷವು ಕಾರಣ. 2. ಆತ್ಮಸಮವೇತ ಸುಖಾದಿಮಾನಸ ಪ್ರತ್ಯಕ್ಷದಲ್ಲಿ ಮನಃ ಸಂಯುಕ್ತ ಸಮವಾಯವು ಸನ್ನಿಕರ್ಷ. 3. ಆತ್ಮಸಮವೇತ ಸಮವೇತ ಸುಖತ್ವಾದಿ ಮಾನಸಪ್ರತ್ಯಕ್ಷದಲ್ಲಿ ಮನಃಸಂಯುಕ್ತ ಸಮವೇತಸಮವಾಯವು ಸನ್ನಿಕರ್ಷ. ರಾಸನಘ್ರಾಣ ಪ್ರತ್ಯಕ್ಷಗಳಲ್ಲಿ ಸಂಯುಕ್ತ ಸಮವಾಯ, ಸಂಯುಕ್ತ ಸಮವೇತ ಸಮವಾಯ ಎರಡು ಸಂನಿಕರ್ಷಗಳಾಗುತ್ತವೆ. ರಸನಘ್ರಾಣಗಳು ರಸ, ರಸತ್ವ, ಗಂಧ ಗಂಧತ್ವಗ್ರಾಹಕಗಳಾಗಿರುತ್ತವೆ. (ರಸಾದಿಪ್ರತ್ಯಕ್ಷಗಳನ್ನು ಹುಟ್ಟಿಸುತ್ತವೆ.) ಶ್ರವಣೇಂದ್ರಿಯವು ಆಕಾಶವಾದುದರಿಂದ ಶಬ್ದವು ಆಕಾಶ ಗುಣವಾದುದರಿಂದ ಶ್ರಾವಣಪ್ರತ್ಯಕ್ಷದಲ್ಲಿ ಸಮವಾಯವು ಸಂನಿಕರ್ಷವಾಗುತ್ತದೆ. ಶಬ್ದವು ಸಮವಾಯದಿಂದ ಆಕಾಶದಲ್ಲಿದೆ. ಶಬ್ದದಲ್ಲಿರುವ ಶಬ್ದತ್ವ,

ಕತ್ವ, ಗತ್ವ ಮುಂತಾದ ಜಾತಿವಿಷಯಕ ಶ್ರಾವಣ ಪ್ರತ್ಯಕ್ಷದಲ್ಲಿ ಸಮವೇತ ಸಮವಾಯವು ಸಂನಿಕರ್ಷಕಾರಣವಾಗುತ್ತದೆ. ಆಕಾಶಸಮವೇತ (ಸಮವಾಯದಿಂದ ಇರುವುದು) ಶಬ್ದ, ಅಲ್ಲಿ ಸಮವಾಯದಿಂದ ಶಬ್ದತ್ವಾದಿಗಳು ಇರುತ್ತವೆ. ಇನ್ನು ಅಭಾವಪ್ರತ್ಯಕ್ಷದಲ್ಲಿ ವಿಶೇಷ್ಯವಿಶೇಷಣಭಾವರೂಪವಾದ ವಿಶೇಷಣತಾ ಎಂಬುದು ಸಂನಿಕರ್ಷ. ಹಿಂದೆ ಹೇಳಿದ ಆರು ಸಂನಿಕರ್ಷಗಳ ಮೇಲೆ ವಿಶೇಷಣತಾ ಸೇರಿಸಿ ಹೇಳಿದರೆ ಈ ಸಂನಿಕರ್ಷವಾಗುತ್ತದೆ. ಘಟದಲ್ಲಿ ಪಟಾಭಾವದ ಪ್ರತ್ಯಕ್ಷ ಬರುತ್ತದೆ. ಘಟಾಧಿಕರಣಕ (ಘಟದಲ್ಲಿರುವ) ಪಟಾಭಾವಪ್ರತ್ಯಕ್ಷದಲ್ಲಿ ಚಕ್ಷುಃಸಂಯುಕ್ತವಿಶೇಷಣತಾ ಸಂನಿಕರ್ಷ. ಚಕ್ಷುಃ ಸಂಯುಕ್ತ= ಘಟ. ತದ್ವಿಶೇಷಣತಾ ಪಟಾಭಾವದಲ್ಲಿದೆ. ಪೀತ ರೂಪದಲ್ಲಿ ನೀಲರೂಪಾಭಾವಪ್ರತ್ಯಕ್ಷಬಂದರೆ ಅಲ್ಲಿ ಚಕ್ಷುಃಸಂಯುಕ್ತಸಮವೇತವಿಶೇಷಣತಾ ಸಂನಿಕರ್ಷ. ನೀಲತ್ವರೂಪದಲ್ಲಿ ಪೀತತ್ವಾಭಾವ ಪ್ರತ್ಯಕ್ಷಬಂದರೆ ಆಲ್ಲಿ ಚಕ್ಷುಃಸಂಯುಕ್ತಸಮವೇತ ಸಮವೇತ ವಿಶೇಷಣತಾ ಸನ್ನಿಕರ್ಷ .ಘಟಸಮವೇತ ನೀಲ. ಅಲ್ಲಿ ಸಮವೇತನೀಲತ್ವ. ತದ್ವಿಶೇಷಣತಾ ಪೀತತ್ವಾಭಾವದಲ್ಲಿ ಬರುತ್ತದೆ. ಹೀಗೆಯೇ ತ್ವಾಚಾದಿ ಪ್ರತ್ಯಕ್ಷದಲ್ಲಿ ತಿಳಿಯಬೇಕು.

**ಚಕ್ಷುಷಾ ಘಟಪ್ರತ್ಯಕ್ಷಜನನೇ ಸಂಯೋಗಃ ಸಂನಿಕರ್ಷಃ**

ಕ್ರಮವಾಗಿ ಆರು ಸಂನಿಕರ್ಷಗಳ ಉಪಯೋಗ ತೋರಿಸುತ್ತಾನೆ. ಕಣ್ಣಿನಿಂದ ಘಟದ ಪ್ರತ್ಯಕ್ಷವಾಗುವಾಗ ಸಂಯೋಗವು ಸನ್ನಿಕರ್ಷವಾಗುತ್ತದೆ.

**ಘಟರೂಪ ಪ್ರತ್ಯಕ್ಷಜನನೇ ಸಂಯುಕ್ತಸಮವಾಯಃ ಸಂನಿಕರ್ಷಃ । ಚಕ್ಷುಃಸಂಯುಕ್ತೇ ಘಟೇ ರೂಪಸ್ಯ ಸಮವಾಯಾತ್ ॥**

ಕಣ್ಣಿನಿಂದ ಘಟಾದಿಗಳ ರೂಪದ ಪ್ರತ್ಯಕ್ಷ ಉಂಟಾಗಬೇಕಾದರೆ ಸಂಯುಕ್ತಸಮವಾಯವು ಸಂನಿಕರ್ಷವಾಗಿರುತ್ತದೆ. ಚಕ್ಷುಃಸಂಯುಕ್ತ = ಘಟ. ಅಲ್ಲಿ ರೂಪಾದಿಗಳು ಸಮವಾಯದಿಂದ ಇರುತ್ತವೆ. ದ್ರವ್ಯಗಳಲ್ಲಿ ಸಮವೇತ (ಸಮವಾಯದಿಂದಿರುವ)ಗಳ ಚಾಕ್ಷುಷ. ತ್ವಾಚ, ರಾಸನ, ಘ್ರಾಣ, ಮಾನಸ ಪ್ರತ್ಯಕ್ಷಗಳಲ್ಲಿ ಸಂಯುಕ್ತ ಸಮವಾಯವೇ ಸಂನಿಕರ್ಷವಾಗಿರುತ್ತದೆ.

**ರೂಪತ್ವಸಾಮಾನ್ಯಪ್ರತ್ಯಕ್ಷೇ ಸಂಯುಕ್ತಸಮವೇತಸಮವಾಯಃ ಸಂನಿಕರ್ಷಃ । ಚಕ್ಷುಃಸಂಯುಕ್ತೇ ಘಟೇ ರೂಪಂ ಸಮವೇತಂ, ತತ್ರ ರೂಪತ್ವಸ್ಯ ಸಮವಾಯಾತ್ ॥**

ಕಣ್ಣಿನಿಂದ ರೂಪತ್ವ ಜಾತಿಯು ಪ್ರತ್ಯಕ್ಷವಾಗಬೇಕಾದರೆ ಸಂಯುಕ್ತ ಸಮವೇತಸಮವಾಯವು ಸಂನಿಕರ್ಷವಾಗುತ್ತದೆ. ಚಕ್ಷುಃ ಸಂಯುಕ್ತ ಘಟ. ಅಲ್ಲಿ ಸಮವಾಯದಿಂದ ರೂಪ ಇದೆ. ರೂಪದಲ್ಲಿ ರೂಪತ್ವ ಸಮವಾಯದಿಂದ ಇದೆ. ಇಲ್ಲಿಯೂ ಹಿಂದಿನಂತೆಯೇ ದ್ರವ್ಯ ಸಮವೇತ ಸಮವೇತದ ಚಾಕ್ಷುಷ, ರಾಸನ. ಘ್ರಾಣ, ಸ್ಪಾರ್ಶನ, ಮಾನಸ ಪ್ರತ್ಯಕ್ಷಗಳಲ್ಲಿ ಸಂಯುಕ್ತಸಮವೇತ ಸಮವಾಯುವು ಸಂನಿಕರ್ಷವಾಗುತ್ತದೆ.

**ಶೋತ್ರೇಷು, ಶಬ್ದಸಾಕ್ಷಾತ್ಕಾರೇ ಸಮವಾಯಃ ಸಂನಿಕರ್ಷಃ । ಕರ್ಣವಿವರವರ್ತ್ಯಾಕಾಶಸ್ಯ ಶ್ರೋತ್ರತ್ವಾಚ್ಛಬ್ದಸ್ಯಾಕಾಶಗುಣತ್ವಾತ್ ಗುಣಗುಣಿನೋಃ ಸಮವಾಯಾತ್ ॥ ಶಬ್ದತ್ವಸಾಕ್ಷಾತ್ಕಾರೇ ಸಮವೇತಸಮವಾಯಃ ಸಂನಿಕರ್ಷಃ ! ಶ್ರೋತ್ರಸಮವೇತೇ ಶಬ್ದೇ ಶಬ್ದತ್ವಸ್ಯ ಸಮವಾಯಾತ್ ॥**

ಕಿವಿಯಿಂದ ಶಬ್ದಪ್ರತ್ಯಕ್ಷ ಹುಟ್ಟಬೇಕಾದರೆ ಸಮವಾಯವು ಸಂನಿಕರ್ಷವಾಗುತ್ತದೆ. ಶ್ರೋತ್ರವೆಂದರೆ ಕಿವಿಯ ತೂತಿನಲ್ಲಿರುವ ಆಕಾಶವೇ. ಆಕಾಶ ಗುಣ ಶಬ್ದ. ಗುಣ (ಶಬ್ದ) ಗುಣಿ (ಆಕಾಶ)ಗಳಿಗೆ ಯಾವಾಗಲೂ ಸಮವಾಯ ಸಂಬಂಧ. ಕಿವಿಯಿಂದ ಶಬ್ದತ್ವಸಾಕ್ಷಾತ್ಕಾರವಾಗಬೇಕಾದರೆ ಸಮವೇತ ಸಮವಾಯಸಂನಿಕರ್ಷವಾಗುತ್ತದೆ. ಕಿವಿಯಲ್ಲಿ ಸಮವೇತ ಶಬ್ದ. ಅಲ್ಲಿ ಸಮವಾಯದಿಂದ ಶಬ್ದತ್ವ ಇರುತ್ತದೆ.

**ಅಭಾವಪ್ರತ್ಯಕ್ಷೇ ವಿಶೇಷ್ಯವಿಶೇಷಣಭಾವಃ ಸಂನಿಕರ್ಷಃ ಘಟಾಭಾವವದ್ಭೂತಲಮಿತ್ಯತ್ರ ಚಕ್ಷುಃಸಂಯುಕ್ತೇ ಭೂತಲೇ ಘಟಾಭಾವಸ್ಯ ವಿಶೇಷಣತ್ವಾತ್ ॥**

ಯಾವುದಾದರೊಂದು ವಸ್ತುವಿನ ಅಭಾವ ಪ್ರತ್ಯಕ್ಷವಾಗಬೇಕಾದರೆ ವಿಶೇಷ್ಯವಿಶೇಷಣಭಾವಸಂನಿಕರ್ಷವಾಗಿರುತ್ತದೆ. ಇದು ವಿಶೇಷಣಭಾವ.

ವಿಶೇಷ್ಯಭಾವ ಎಂದು ಎರಡು ರೀತಿಯಾಗುತ್ತದೆ. 'ಘಟಾಭಾವವುಳ್ಳ ಭೂತಲ' ಎಂಬಲ್ಲಿ ಚಕ್ಷುಸಂಯುಕ್ತವಾದ ಭೂತಲ ವಿಶೇಷ್ಯ. ಅಲ್ಲಿ ಘಟಾಭಾವ ವಿಶೇಷಣವಾಗಿ ತೋರುವುದರಿಂದ ವಿಶೇಷಣಭಾವಸಂನಿಕರ್ಷ. 'ಭೂತಲದಲ್ಲಿ ಘಟವಿಲ್ಲ' ಇಲ್ಲಿ ಸಪ್ತಮ್ಯಂತ ವಿಶೇಷಣವಾದುದರಿಂದ ಘಟಾಭಾವ ವಿಶೇಷ್ಯವಾಗಿರುವುದರಿಂದ ವಿಶೇಷ್ಯಭಾವ ಸಂನಿಕರ್ಷ. ಸಾಮಾನ್ಯವಾಗಿ ವಿಶೇಷಣತಾಸಂನಿಕರ್ಷವೆಂದರೆ ಹಿಂದೆ ಹೇಳಿದ ಐದು ಸಂನಿಕರ್ಷದಲ್ಲಿಯೂ ಬರುತ್ತದೆ. ಅಲ್ಲಿ ಸಂಯೋಗ ಎಂಬಲ್ಲಿ ಸಂಯುಕ್ತವೆಂದೂ ಸಮವಾಯ ಎಂಬಲ್ಲಿ ಸಮವೇತವೆಂದೂ ಹೇಳಿ ಆಮೇಲೆ ವಿಶೇಷಣತಾ ಎಂದು ಸೇರಿಸಬೇಕು. ರೂಪಾಭಾವ ಪ್ರತ್ಯಕ್ಷದಲ್ಲಿ ಚಕ್ಷುಃಸಂಯುಕ್ತಸಮವೇತವಿಶೇಷಣತಾ ಸಂನಿಕರ್ಷ, ಹೀಗೆ ಎಲ್ಲಾ ಕಡೆಯಲ್ಲಿಯೂ ಊಹಿಸಿ ತಿಳಿಯಬೇಕು. (ಇದು ಹಿಂದೆ ಹೇಳಿದೆ.)

**ಏವಂ ಸಂನಿಕರ್ಷಷಟ್ಕಜನ್ಯಂ ಜ್ಞಾನಂ ಪ್ರತ್ಯಕ್ಷಂ, ತತ್ಕರಣಮಿಂದ್ರಿಯಂ, ತಸ್ಮಾದಿಂದ್ರಿಯಂ ಪ್ರತ್ಯಕ್ಷ ಪ್ರಮಾಣಮಿತಿ ಸಿದ್ಧಮ್॥**

ಹೀಗೆ ಈ ಆರುವಿಧ ಸಂನಿಕರ್ಷದಿಂದ ಉಂಟಾದ ಜ್ಞಾನವೇ ಪ್ರತ್ಯಕ್ಷಜ್ಞಾನ. ಇದಕ್ಕೆ ಕರಣ ಅಂದರೆ ಅಸಾಧಾರಣ ಕಾರಣವಾದದ್ದು ನಯನ ಮುಂತಾದ ಇಂದ್ರಿಯಗಳು. ಆದುದರಿಂದ ಪ್ರತ್ಯಕ್ಷಪ್ರಮಾಣಗಳೆಂದರೆ ಕಣ್ಣು ಮುಂತಾದ ಇಂದ್ರಿಯಗಳೆಂದು ಸಿದ್ಧವಾಗುತ್ತದೆ. ಪ್ರತ್ಯಕ್ಷಪ್ರಮಾತ್ಮಕ ಜ್ಞಾನವು ಇವುಗಳಿಂದ ಉಂಟಾಗುತ್ತದೆ.

## ॥ ಇತಿ ಪ್ರತ್ಯಕ್ಷಪರಿಚ್ಛೇದಃ ॥

## ಅಥ ಅನುಮಾನಪರಿಚ್ಛೇದಃ ॥

### ಅನುಮಿತಿಕರಣಮನುಮಾನಮ್ ॥

ಅನುಮಾನ ಪ್ರಮಾಣ, ಅದರಿಂದ ಉಂಟಾದ ಅನುಮಿತಿರೂಪ ಪ್ರಮಾಜ್ಞಾನ ಇವುಗಳನ್ನು ಈ ಪ್ರಕರಣದಲ್ಲಿ ವಿವರಿಸುತ್ತಾನೆ. ಅನುಮಿತಿಗೆ ಅಸಾಧಾರಣಕಾರಣವಾಗಿರುವುದು ಅನುಮಾನ. ಅನುಮಾನವೆಂದರೆ ವ್ಯಾಪ್ತಿಜ್ಞಾನ. ಇದು ಕರಣವೆಂದಮೇಲೆ ವ್ಯಾಪಾರದಿಂದ ಕೂಡಿ ಪೂರ್ವ ವೃತ್ತಿ (ಅನುಮಿತಿಯ ಪೂರ್ವಕ್ಷಣದಲ್ಲಿ) ಯಾಗಿರಬೇಕು. 'ವ್ಯಾಪಾರವದ ಸಾಧಾರಣಂ ಕಾರಣಂ ಕರಣಂ' ಎಂದು ಹಿಂದೆ ಲಕ್ಷಣ ಹೇಳಿದೆ. ವ್ಯಾಪ್ತಿ ಜ್ಞಾನದಲ್ಲಿ 'ಪರಾಮರ್ಶ' ಎಂಬುದು ವ್ಯಾಪಾರ. ಅನುಮಿತಿ ಕಾರ್ಯ (ಫಲ) ವಾಗುತ್ತದೆ. ಪರಾಮರ್ಶವು ವ್ಯಾಪ್ತಿಜ್ಞಾನ ಜನ್ಯ (ಹುಟ್ಟ) ವಾಗಿ ವ್ಯಾಪ್ತಿಜ್ಞಾನಜನ್ಯ (ಹುಟ್ಟಿದ) ಅನುಮಿತಿಗೆ ಜನಕವಾಗುವುದರಿಂದ ವ್ಯಾಪಾರ ಲಕ್ಷಣ (ತಜ್ಜನ್ಯತ್ವೇ ಸತಿ ತಜ್ಜನ್ಯಜನಕತ್ವಂ) ಅಲ್ಲಿ ಬರುತ್ತದೆ. 'ಅನುಮಿತಿಕರಣತ್ವಂ' ಅನುಮಾನದ ಲಕ್ಷಣ. ಪರಾಮರ್ಶರೂಪ ವ್ಯಾಪಾರದ ಮೂಲಕ ವ್ಯಾಪ್ತಿ ಜ್ಞಾನರೂಪ ಅನುಮಾನವು ಅನುಮಿತಿಗೆ ಅಸಾಧಾರಣ ಕಾರಣವಾಗುವುದರಿಂದ ಕರಣತ್ವ ಅನುಮಾನಕ್ಕೆ ಸಂಗತವಾಗುತ್ತದೆ.

### ಪರಾಮರ್ಶಜನ್ಯಂ ಜ್ಞಾನಮನುಮಿತಿಃ ॥

ಪರಾಮರ್ಶಜನ್ಯತ್ವೇ ಸತಿ ಜ್ಞಾನತ್ವಂ ಅನುಮಿತಿಲಕ್ಷಣ. ಸತಿ ಸಪ್ತಮಿಗೆ ವಿಶಿಷ್ಟಾರ್ಥತ್ವ ತೋರುವುದರಿಂದ ಪರಾಮರ್ಶಜನ್ಯತ್ವವಿಶಿಷ್ಟ ಜ್ಞಾನತ್ವಂ ಎಂದು ಪರ್ಯವಸಿತವಾಗುತ್ತದೆ. ಕೇವಲ ಜ್ಞಾನತ್ವಂ ಎಂದು ಹೇಳಿದರೆ ಪ್ರತ್ಯಕ್ಷಾದಿಜ್ಞಾನದಲ್ಲಿ ಅತಿವ್ಯಾಪ್ತಿ. ಆದುದರಿಂದ ಪರಾಮರ್ಶ ಜನ್ಯತ್ವೇ ಸತಿ ಎಂದು ವಿಶೇಷಣದಳ ಹೇಳಬೇಕು. ಕೇವಲ 'ಪರಾಮರ್ಶ ಜನ್ಯತ್ವಂ' ಎಂದರೆ ಪರಾಮರ್ಶಧ್ವಂಸವೂ (ನಾಶ) ಪರಾಮರ್ಶದಿಂದ ಹುಟ್ಟು ವುದರಿಂದ ಪರಾಮರ್ಶಧ್ವಂಸದಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದುದರಿಂದ ಜ್ಞಾನತ್ವಂ ಎಂದು ವಿಶೇಷ್ಯಹೇಳಬೇಕು. ಧ್ವಂಸ ಜ್ಞಾನವಲ್ಲ. ಪರಾಮರ್ಶ ದಿಂದ ಅನುಮಿತಿ ಹುಟ್ಟುತ್ತದೆ. ಪರಾಮರ್ಶ ಲಕ್ಷಣಮುಂದೆ ಹೇಳುತ್ತಾನೆ.

**ವ್ಯಾಪ್ತಿವಿಶಿಷ್ಟಪಕ್ಷಧರ್ಮತಾಜ್ಞಾನಂ ಪರಾಮರ್ಶಃ । ಯಥಾ 'ವಹ್ನಿವ್ಯಾಪ್ಯಧೂಮವಾನಯಂ ಪರ್ವತ' ಇತಿ ಜ್ಞಾನಂ ಪರಾಮರ್ಶಃ । ತಜ್ಜನ್ಯಂ 'ಪರ್ವತೋ ವಹ್ನಿಮಾನಿ' ತಿ ಜ್ಞಾನಮನುಮಿತಿಃ ॥**

'ಘಟಿತಜ್ಞಾನೇ ಘಟಕಜ್ಞಾನಂ ಕಾರಣಮ್' ಅನೇಕಪದಘಟಿತ ವಾಕ್ಯ (ಘಟಿತ) ಜ್ಞಾನವಾಗಬೇಕಾದರೆ ಅದರಲ್ಲಿ ಸೇರಿರುವ (ಘಟಕ) ಪದಗಳ ಜ್ಞಾನವಾಗಬೇಕು. ಪರಾಮರ್ಶದಿಂದ ಹುಟ್ಟಿದ ಜ್ಞಾನ ಅನುಮಿತಿ ಎಂದಾಗ ಪರಾಮರ್ಶ ಎಂದರೇನು? ಎಂದು ಜಿಜ್ಞಾಸೆ ಬರುತ್ತದೆ. ಆದುದರಿಂದ ಪರಾಮರ್ಶಲಕ್ಷಣ ಹೇಳುತ್ತಾನೆ. ವ್ಯಾಪ್ತಿವಿಷಯಕವಾದ ಪಕ್ಷಧರ್ಮತಾಜ್ಞಾನವು ಪರಾಮರ್ಶ. 'ವಹ್ನಿವ್ಯಾಪ್ಯಧೂಮವಾನಯಂ ಪರ್ವತಃ' ಎಂಬ ಜ್ಞಾನವು ಪರಾಮರ್ಶ. ಇಲ್ಲಿ ವಹ್ನಿವ್ಯಾಪ್ತಿಯೂ ಧೂಮವೂ ಪ್ರಕಾರವಾಗಿ ತೋರಿ ಅವುಗಳ ವೈಶಿಷ್ಟ್ಯವು ಪರ್ವತದಲ್ಲಿ ತೋರುತ್ತದೆ. ವಹ್ನಿವ್ಯಾಪ್ಯಧೂಮವೆಂದರೆ ವಹ್ನಿವ್ಯಾಪ್ತಿಯಿಂದ ಕೂಡಿದ ಧೂಮವೆಂದರ್ಥ. ಧೂಮದಲ್ಲಿ' ವಹ್ನಿವ್ಯಾಪ್ತಿಯು ಪ್ರಕಾರವಾಗಿ ತೋರುತ್ತದೆ. ಪ್ರಕಾರತಾ ವಹ್ನಿವ್ಯಾಪ್ತಿನಿಷ್ಠಾ. (ವಹ್ನಿವ್ಯಾಪ್ತಿಯಲ್ಲಿದೆ) ವಹ್ನಿವ್ಯಾಪ್ತಿನಿಷ್ಠ ಪ್ರಕಾರತಾನಿರೂಪಕವು ಧೂಮ. ಇದು ಪರ್ವತದಲ್ಲಿ ತೋರುವುದರಿಂದ ಪರ್ವತದಲ್ಲಿ ಧೂಮವು ಪ್ರಕಾರ. ಧೂಮನಿಷ್ಠಪ್ರಕಾರತಾನಿರೂಪಕವಾದದ್ದು ಪರ್ವತ. ಇವುಗಳಿಗೆ ಪರಸ್ಪರ ನಿರೂಪ್ಯನಿರೂಪಕಭಾವ ಹೇಳಬೇಕು. ವಿಷಯಿತಾ ಸಂಬಂಧದಿಂದ ವ್ಯಾಪ್ತಿವಿಶಿಷ್ಟವಾದ ಪಕ್ಷಧರ್ಮತಾಜ್ಞಾನವು ಪರಾಮರ್ಶ ಎಂದರೆ 'ಪಕ್ಷನಿಷ್ಠ ವಿಶೇಷ್ಯತಾ ನಿರೂಪಿತಾ ಯಾ ಹೇತುನಿಷ್ಠಾ ಪ್ರಕಾರತಾ, ತನ್ನಿರೂಪಿತಾ ಯಾ ವ್ಯಾಪ್ತಿನಿಷ್ಠಾ ಪ್ರಕಾರತಾ ತಾಚ್ಛಾಲಿಜ್ಞಾನಂ ಪರಾಮರ್ಶಃ' ಎಂದು ಫಲಿತವಾಗುತ್ತದೆ. ಪರ್ವತದಲ್ಲಿ ತೋರಿದ ಧೂಮದಲ್ಲಿ ವಹ್ನಿವ್ಯಾಪ್ತಿ ತೋರುತ್ತಿರಬೇಕು. ವಹ್ನಿವ್ಯಾಪ್ತಿಯುಳ್ಳ ಧೂಮ ಪರ್ವತದಲ್ಲಿರಬೇಕು. ಎಂದರ್ಥ. ಹೀಗೆ ಪರಸ್ಪರ ನಿರೂಪ್ಯ ನಿರೂಪಕಭಾವ ಹೇಳದಿದ್ದರೆ ವಹ್ನಿವ್ಯಾಪ್ತಿ ಧೂಮದಲ್ಲಿ ತೋರುತ್ತಿದ್ದು ಪರ್ವತದಲ್ಲಿ ಧೂಮಕ್ಕಿಂತ ಬೇರೆಯಾದ ವಸ್ತುವಿನ ಸಂಬಂಧ ತೋರುತ್ತಿರುವ 'ಧೂಮೋ

ವಹ್ನಿವ್ಯಾಪ್ಯ ; ಆಲೋಕವಾನ್ ಪರ್ವತಃ' ಎಂಬ ಸಮೂಹಾಲಂಬನಾತ್ಮಕ ಜ್ಞಾನದಲ್ಲಿ ಪರಾಮರ್ಶ ಲಕ್ಷಣವು ಅತಿವ್ಯಾಪ್ತವಾಗುತ್ತದೆ. ವ್ಯಾಪ್ತಿವಿಶಿಷ್ಟಂ ಚ ತತ್ ಪಕ್ಷಧರ್ಮತಾಜ್ಞಾನಂಚ 'ವ್ಯಾಪ್ತಿ ವಿಶಿಷ್ಟ ಪಕ್ಷಧರ್ಮತಾಜ್ಞಾನಂ' ಕರ್ಮಧಾರಯ ಸಮಾಸ. ಇಲ್ಲಿ ಎರಡು ಪದಾರ್ಥಗಳಿಗೂ ಅಭೇದ ತೋರುತ್ತದೆ. ವ್ಯಾಪ್ತಿವಿಶಿಷ್ಟ ಅಂದರೆ ವ್ಯಾಪ್ತಿಪ್ರಕಾರತಾ ನಿರೂಪಕವೆಂದೂ ಪಕ್ಷಧರ್ಮತಾಜ್ಞಾನಂ ಎಂದರೆ ಪಕ್ಷಸಂಬಂಧವಿಷಯಕ ಜ್ಞಾನವೆಂದೂ ಅರ್ಥವಾಗುವುದರಿಂದ 'ವ್ಯಾಪ್ತಿಪ್ರಕಾರಕಾಭಿನ್ನಂ ಯತ್ ಪಕ್ಷಸಂಬಂಧ ವಿಷಯಕಂ ಜ್ಞಾನಂ ತತ್ ಪರಾಮರ್ಶಃ' ಎಂದು ಅರ್ಥವಾಗುತ್ತದೆ. ಹಿಂದೆ ಹೇಳಿದ ಸಮೂಹಾಲಂಬನ ಜ್ಞಾನದಲ್ಲಿ ವ್ಯಾಪ್ತಿಪ್ರಕಾರತಾ ನಿರೂಪಕತ್ವವೂ ಇದೆ. ಆಲೋಕಕ್ಕೆ ಪಕ್ಷಸಂಬಂಧ ತೋರುವುದರಿಂದ ಪಕ್ಷಸಂಬಂಧವಿಷಯಕತ್ವವೂ ಇದೆ. ವ್ಯಾಪ್ತಿ ಧೂಮದಲ್ಲಿ ತೋರಿದೆ. ಆಲೋಕ ಪರ್ವತದಲ್ಲಿ ತೋರಿದೆ. ಇದರಿಂದ ಅನುಮಿತಿ ಹುಟ್ಟುವುದಿಲ್ಲ. ವ್ಯಾಪ್ತಿಯ ವೈಶಿಷ್ಟ ಎಲ್ಲಿ ತೋರಿದೆಯೋ ಆದರ ವೈಶಿಷ್ಟ್ಯವೇ ಪಕ್ಷದಲ್ಲಿ ತೋರಬೇಕು. ಅದೇ ಪರಾಮರ್ಶ ಜ್ಞಾನ. ವಹ್ನಿವ್ಯಾಪ್ತಿ ಧೂಮದಲ್ಲಿ ತೋರಿ ವಹ್ನಿವ್ಯಾಪ್ತಿಯುಳ್ಳ ಆ ಧೂಮವು ಪರ್ವತದಲ್ಲಿ ತೋರಿದರೆ (ಧೂಮಕ್ಕೆ ಪರ್ವತವೃತ್ತಿತ್ವ ಇದ್ದರೆ) ಆಗ ವಿಶಿಷ್ಟ ವೈಶಿಷ್ಟ್ಯಾವಗಾಹಿ ಜ್ಞಾನವಾಗುತ್ತದೆ. ವಹ್ನಿವ್ಯಾಪ್ತಿ ಧೂಮದಲ್ಲಿ ತೋರಿದರೆ ಅದು ಧೂಮಕ್ಕೆ ಪ್ರಕಾರವಾಗುತ್ತದೆ. ಪರ್ವತದಲ್ಲಿ ಧೂಮವೈಶಿಷ್ಟ್ಯ ತೋರಿದರೆ ಧೂಮ ಆಗ ಪ್ರಕಾರವಾಗುತ್ತದೆ. ಧೂಮದಲ್ಲಿ ವಹ್ನಿವ್ಯಾಪ್ತಿನಿಷ್ಠ ಪ್ರಕಾರತಾನಿರೂಪಕತ್ವವೂ ಪರ್ವತನಿಷ್ಠ ವಿಶೇಷ್ಯತಾ ನಿರೂಪಿತತ್ವವೂ ಇದ್ದು ಅದರ ವೈಶಿಷ್ಟ್ಯ ಪರ್ವತದಲ್ಲಿ ತೋರಬೇಕು. 'ವಹ್ನಿವ್ಯಾಪ್ಯಧೂಮವಾನಯಂ ಪರ್ವತಃ' ಎಂಬಲ್ಲಿ ವಹ್ನಿವ್ಯಾಪ್ಯಃ (ವ್ಯಾಪ್ತಿ ವಿಶಿಷ್ಟ) ಯಃ ಧೂಮಃ, ತಾದೃಶ–ಧೂಮವಿಶಿಷ್ಟಃ ಪರ್ವತಃ= ವಹ್ನಿವ್ಯಾಪ್ತಿಯಿಂದ ಕೂಡಿದ ಧೂಮದಿಂದ ಕೂಡಿದ ಪರ್ವತ ಎಂದು ತೋರುವುದರಿಂದ ಪರಾಮರ್ಶಲಕ್ಷಣ ಬರುತ್ತದೆ. ಈ ರೀತಿಯಾದ ಪರಾಮರ್ಶದಿಂದ 'ಪರ್ವತೋ ವಹ್ನಿಮಾನ್' (ಪರ್ವತ ವಹ್ನಿಯಿಂದ ಕೂಡಿದೆ.) ಎಂಬ ಜ್ಞಾನ ಹುಟ್ಟುವುದರಿಂದ ಅದು ಅನುಮಿತಿ. ಆಗ ಕಾರ್ಯಕಾರಣಭಾವ ಹೀಗೆ ಹೇಳಬೇಕು. " ಪರ್ವತತ್ವಾವಚ್ಛಿನ್ನೋದ್ದೇಶ್ಯತಾನಿರೂಪಿತ ಸಂಯೋಗಸಂಬಂಧಾವಚ್ಛಿನ್ನ ವಹ್ನಿತ್ವಾವಚ್ಛಿನ್ನ

ವಿಧೇಯ ಕಾನುಮಿತಿತ್ವಾವಚ್ಛಿನ್ನಂ ಪ್ರತಿ ವಹ್ನಿವ್ಯಾಪ್ತಿಪ್ರಕಾರತಾ ನಿರೂಪಿತ ಧೂಮ ತ್ವಾಚ್ಛಿನ್ನಪ್ರಕಾರತಾನಿರೂಪಿತಪರ್ವತತ್ವಾವಚ್ಛಿನ್ನವಿಶೇಷ್ಯತಾಶಾಲಿ ನಿರ್ಣಯಃ ಕಾರಣಮ್." 'ವಹ್ನಿವ್ಯಾಪ್ಯ ಧೂಮವಾನಯಂ ಪರ್ವತಃ' ಎಂಬುದು ಈ ನಿರ್ಣಯಾಕಾರ. ಅನುಮಿತಿಯಲ್ಲಿ ಪರ್ವತವು ಉದ್ದೇಶ್ಯ ವಹ್ನಿಯು ವಿಧೇಯ. ಬೆಂಕಿಯುಸಂಯೋಗಸಂಬಂಧದಿಂದ ಪರ್ವತದಲ್ಲಿರುವು ದರಿಂದ ಸಂಯೋಗಸಂಬಂಧದಿಂದ ವಿಧೇಯವಾಗುತ್ತದೆ. ಬೆಂಕಿಯಲ್ಲಿರುವ ವಿಧೇಯತಾ ಸಂಯೋಗಸಂಬಂಧಾವಚ್ಛಿನ್ನವಾಗುತ್ತದೆ. ಅದು ವಹ್ನಿತ್ವಾವ ಚ್ಛಿನ್ನವೂ ಆಗಿದೆ. ವಹ್ನಿಯಲ್ಲಿರುವ ವಿಧೇಯತಾ ನಿರೂಪಕವು ಅನುಮಿತಿ ಯಾಗುವುದರಿಂದ ವಹ್ನಿತ್ವಾವಚ್ಛಿನ್ನ ವಿಧೇಯಕಾ ಅನುಮಿತಿ ಎಂದಿದೆ. 'ವಹ್ನಿವ್ಯಾಪ್ತಿಯಿಂದ ಕೂಡಿದ ಧೂಮದಿಂದ ಕೂಡಿದ ಪರ್ವತ' ಎಂಬ ಜ್ಞಾನದಲ್ಲಿ ಪರ್ವತವು ವಿಶೇಷ್ಯ, ವಿಶೇಷ್ಯತಾ ಅದರಲ್ಲಿದೆ. ಅದು ಪರ್ವ ತತ್ವಾವಚ್ಛಿನ್ನವೂ ಆಗಿದೆ. ಪರ್ವತತ್ವಾವಚ್ಛಿನ್ನ ವಿಶೇಷ್ಯತಾ ಜ್ಞಾನದಲ್ಲಿ ತೋರುವುದರಿಂದ ಶಾಲಿ ಎಂದಿದೆ. ಪರ್ವತದಲ್ಲಿ ಹಿಂದೆ ಹೇಳಿದಂತೆ ಧೂಮವು ಪ್ರಕಾರ. ಧೂಮದಲ್ಲಿ ವಹ್ನಿವ್ಯಾಪ್ತಿಯು ಪ್ರಕಾರ. ಪ್ರಕಾರತಾ ಅಲ್ಲಿದೆ. ವಹ್ನಿವ್ಯಾಪ್ತಿಯಲ್ಲಿರುವ ಪ್ರಕಾರತಾ ನಿರೂಪಿತವಾದದ್ದು ಧೂಮಪ್ರಕಾರತ್ವಾ ಆಗುತ್ತದೆ. ಧೂಮತ್ವಾವಚ್ಛಿನ್ನ ಪ್ರತಾರತಾನಿರೂಪಿತವಾದದ್ದು ಪರ್ವತತ್ವಾವ ಚ್ಛಿನ್ನವಿಶೇಷ್ಯತಾ ಆಗುತ್ತದೆ.

**ಯತ್ರ ಯತ್ರ ಧೂಮಸ್ತತ್ರಾಗ್ನಿರಿತಿ ಸಾಹಚರ್ಯನಿಯಮೋ ವ್ಯಾಪ್ತಿಃ ||**

ಪರಾಮರ್ಶದಲ್ಲಿ ವ್ಯಾಪ್ತಿಜ್ಞಾನವೈಶಿಷ್ಟ್ಯ (ಕೂಡಿರುವಿಕೆ) ಬಂದುದ ರಿಂದ ವ್ಯಾಪ್ತಿ ಎಂದರೇನು ಎಂಬ ಜಿಜ್ಞಾಸೆ ಹೋಗಲಾಡಿಸಲು ವ್ಯಾಪ್ತಿ ಸ್ವರೂಪ ತೋರಿಸುತ್ತಾನೆ. ಎಲ್ಲೆಲ್ಲಿ ಧೂಮವಿವೆಯೋ ಅಲ್ಲಿ ಬೆಂಕಿ ಇದೆ ಎಂಬುದು ವ್ಯಾಪ್ತಿಯ ಆಕಾರ. ಎಲ್ಲಿಎಲ್ಲಿ ಎಂಬ ವೀಪ್ಸೆಯಿಂದ ಧೂಮಕ್ಕೆ ಆಶ್ರಯವಾದ (ಅಧಿಕರಣವಾದ) ಎಷ್ಟು ದೇಶಗಳಿವೆಯೋ ಅಲ್ಲೆಲ್ಲಾ ವಹ್ನಿ ಇವೆಯೆಂದು ತಿಳಿಯುವುದರಿಂದ ಎಲ್ಲಾ ಧೂಮಾಶ್ರಯ ಎಂಬರ್ಥ ಬಂದುದ ರಿಂದ ವಹ್ನಿಯು ಧೂಮಕ್ಕೆ ವ್ಯಾಪಕ ಎಂದು ತಿಳಿಯುತ್ತದೆ. ಧೂಮವು

ವಹ್ನಿಯ ವ್ಯಾಪ್ಯ. ಧೂಮವಿದ್ದಲ್ಲಿ ಎಲ್ಲಾಕಡೆ ವಹ್ನಿ ಇವೆ. ಆದ್ದರಿಂದಅದು ವ್ಯಾಪಕ. ವಹ್ನಿ ಇದ್ದಲ್ಲಿ ಎಲ್ಲಾಕಡೆ ಧೂಮ ಇರುವುದಿಲ್ಲ. ಆದ್ದರಿಂದ ಅದು ವ್ಯಾಪ್ಯ. ವಹ್ನಿಯು ವ್ಯಾಪಕ ಅಂದರೆ ಬಹುಸ್ಥಳದಲ್ಲಿರುವುದು. ಧೂಮವು ವ್ಯಾಪ್ಯ ಅಂದರೆ ಅಲ್ಪಸ್ಥಳದಲ್ಲಿರುವುದು. ಆದುದರಿಂದ ಎಲ್ಲೆಲ್ಲಿ ಅಗ್ನಿಯೋ ಅಲ್ಲಿ ಧೂಮ ಎಂಬ ವ್ಯಾಪ್ತಿ ಇಲ್ಲ. ಈ ರೀತಿಯಾದ ಸಾಹಚರ್ಯನಿಯಮವೇ ವ್ಯಾಪ್ತಿ. ಸಹಚರತಿ ಇತಿ ಸಹಚರಃ= ಒಟ್ಟಿಗೆ ಇರುವುದು. ಸಹಚರದ ಭಾವ ಸಾಹಚರ್ಯ. ಒಂದೇ ಅಧಿಕರಣ (ಆಶ್ರಯ)ದಲ್ಲಿ ಇರುವಿಕೆ. ಸಾಮಾನಾಧಿಕರಣ್ಯದ ನಿಯಮ ಅಂದರೆ ನಿಯತವಾದ ಸಾಮಾನಾಧಿ ಕರಣ್ಯವೇ ವ್ಯಾಪ್ತಿ. ಇದನ್ನು ಅವ್ಯಭಿಚರಿತತ್ವಂ ಎನ್ನುತ್ತಾರೆ. (ವ್ಯಭಿಚಾರ ಇಲ್ಲದಿರುವುದು.) ವ್ಯಭಿಚಾರ ಎಂದರೆ ಸಾಧ್ಯಾಭಾವವದ್ವೃತ್ತಿತ್ವಂ= ಸಾಧ್ಯ ಇಲ್ಲದಿರುವಲ್ಲಿ ಇರುವುದು. 'ಸಾಧ್ಯಾಭಾವವದವೃತ್ತಿತ್ವಂ ವ್ಯಾಪ್ತಿಃ' ಸಾಧ್ಯ ಇಲ್ಲದಿರುವಲ್ಲಿ ಇಲ್ಲದಿರುವಿಕೆ. ಇದು ಧೂಮದಲ್ಲಿ ಸಂಭವಿಸುವುದರಿಂದ ವ್ಯಾಪ್ಯವಾದ ಧೂಮದ ಲಕ್ಷಣವಾಗುತ್ತದೆ. ಸಾಧ್ಯ (ಪರ್ವತದಲ್ಲಿ ಸಾಧಿಸಲು ಯೋಗ್ಯವಾದದ್ದು) ವಹ್ನಿ. ಸಾಧ್ಯದ ಅಭಾವವುಳ್ಳದ್ದು. (ಬೆಂಕಿ ಇಲ್ಲ ದಿರುವುದು) ಕೆರೆ. ಅಲ್ಲಿ ಇರುವುದು ನೀರು. ಅವೃತ್ತಿ= ಇಲ್ಲದೆ ಇರುವುದು ಧೂಮ. ಅವೃತ್ತಿತ್ವ ಧೂಮದಲ್ಲಿ ಬರುತ್ತದೆ. ಸಾಹಚರ್ಯನಿಯಮಕ್ಕೆ 'ಸಾಧ್ಯಾಭಾವವದವೃತ್ತಿತ್ವಂ' ಎಂದರ್ಥವಾಯಿತು. ಇದನ್ನು ಪೂರ್ವಪಕ್ಷ ವ್ಯಾಪ್ತಿ ಎನ್ನುತ್ತಾರೆ. ಸಾಹಚರ್ಯನಿಯಮ ಎಂಬುದಕ್ಕೆ ನಿಯತಸಾಹಚರ್ಯ ಎಂದು ಫಲಿತಾರ್ಥವಾಗುತ್ತದೆ. ನಿಯತವೆಂದರೆ ವ್ಯಾಪಕವೆಂದರ್ಥ. ಸಾಹಚರ್ಯವೆಂದರೆ ಸಾಮಾನಾಧಿಕರಣ್ಯ (ಒಂದೇ ಆಶ್ರಯದಲ್ಲಿರುವಿಕೆ)ವೆಂದು ಹಿಂದೆ ಹೇಳಿದೆ. ಧೂಮನಿಯತ (ವ್ಯಾಪಕ) ವಹ್ನಿಸಾಮಾನಾಧಿಕರಣ್ಯವು ವ್ಯಾಪ್ತಿ ಆಗುತ್ತದೆ. ಅಗ್ನಿಯಲ್ಲಿ ಧೂಮವ್ಯಾಪಕತ್ವ ತೋರುತ್ತದೆ. ಧೂಮ ವ್ಯಾಪಕ ಅಂದರೆ ಧೂಮಸಮಾನಾಧಿಕರಣಾತ್ಯಂತಾಭಾವಪ್ರತಿಯೋಗಿ ತಾನವಚ್ಛೇದಕಧರ್ಮವುಳ್ಳದ್ದು ಎಂದರ್ಥವಾಗುತ್ತದೆ. ಧೂಮದ ಆಶ್ರಯದಲ್ಲಿ ಬೆಂಕಿ ಇಲ್ಲ ಎಂದು ಹೇಳಲು ಬರುವುದಿಲ್ಲ. ಧೂಮಸಮಾನಾಧಿಕರಣಾತ್ಯಂತಾ ಭಾವ ಎಂದರೆ ಧೂಮದ ಅಧಿಕರಣದಲ್ಲಿರುವ ಅತ್ಯಂತಾಭಾವ. ಧೂಮದ ಅಧಿಕರಣ ಅಡಿಗೆಮನೆ, ಪರ್ವತಮುಂತಾದುವುಗಳು. ಅಲ್ಲಿ ಬೆಂಕಿ ಇಲ್ಲದೇ

ಇರುವುದಿಲ್ಲ. ಇನ್ನು ಯಾವುದಿಲ್ಲ ಅಂದರೆ (ಯಾವುದಿಲ್ಲವೋ ಅದು) ಕಲ್ಲು (ನೀರು) ಇಲ್ಲ ಎನ್ನಬಹುದು. ಕಲ್ಲಿನ ಅಭಾವವು ಧೂಮಸಮಾನಾಧಿಕರಣಾತ್ಯಂತಾಭಾವವಾಗುತ್ತದೆ. ಯಾವುದರ ಅಭಾವ ಹೇಳುತ್ತೇವೋ ಅದು ಪ್ರತಿಯೋಗೀ. ಇಲ್ಲಿ ಕಲ್ಲಿನ ಅಭಾವ ಹೇಳಿರುವುದರಿಂದ ಅತ್ಯಂತಾಭಾವಕ್ಕೆ ಪ್ರತಿಯೋಗಿ ಕಲ್ಲು. ಪ್ರತಿಯೋಗಿತಾ ಕಲ್ಲಿನಲ್ಲಿದೆ. ಪ್ರತಿಯೋಗಿತಾವಚ್ಛೇದಕ ಪಾಷಾಣತ್ವ (ಕಲ್ಲಿನಲ್ಲಿರುವ ಧರ್ಮ) ಅನವಚ್ಛೇದಕ (ಅವಚ್ಛೇದಕವಾಗದಿರುವುದು) ಧರ್ಮ ವಹ್ನಿತ್ವ. ಅದು ಉಳ್ಳದ್ದು ವಹ್ನಿ. ಆದುದರಿಂದ ಧೂಮವ್ಯಾಪಕತ್ವ ವಹ್ನಿಯಲ್ಲಿ ಬರುತ್ತದೆ. ಇದರ ಸಾಮಾನಾಧಿಕರಣ್ಯ ಅಂದರೆ ಈರೀತಿಯಾಗಿರುವ ಬೆಂಕಿಯ ಅಧಿಕರಣವಾದ, ಅಡಿಗೆಮನೆ ಪರ್ವತ ಮುಂತಾದವುಗಳಲ್ಲಿ ಧೂಮಇರುತ್ತದೆ. ಧೂಮವ್ಯಾಪಕವಾದ ವಹ್ನಿಗೂ, ಧೂಮಕ್ಕೂ ಒಂದೇ ಆಶ್ರಯವಿರುತ್ತದೆ ಎಂದರ್ಥ. ಇದಕ್ಕೆ ಸಿದ್ಧಾಂತವ್ಯಾಪ್ತಿ ಎಂದು ಕರೆಯುತ್ತಾರೆ.

'ಸಾಧ್ಯಾಭಾವವದವೃತ್ತಿತ್ವಂ' ಇದು ಪೂರ್ವಪಕ್ಷವ್ಯಾಪ್ತಿಯ ಸ್ವರೂಪ. ಸಾಧ್ಯ (ಬೆಂಕಿ) ಇಲ್ಲದಿರುವಲ್ಲಿ ಇಲ್ಲದಿರುವುದು. ಬೆಂಕಿ ಇಲ್ಲದೇ ಇರುವ ಕೆರೆ ಮುಂತಾದವುಗಳಲ್ಲಿ ಹೇತುವಾದ ಧೂಮ ಇರುವುದಿಲ್ಲ. ಇಲ್ಲಿ ಸಂಬಂಧಾದಿಗಳನ್ನೂ ಧರ್ಮವನ್ನೂ ಸೇರಿಸಿ ಪರಿಷ್ಕಾರ ಹೀಗೆ ಮಾಡುತ್ತಾರೆ. " ಸಾಧ್ಯತಾವಚ್ಛೇದಕ ಸಂಬಂಧಾವಚ್ಛಿನ್ನ ಸಾಧ್ಯತಾವಚ್ಛೇದಕಾವಚ್ಛಿನ್ನ ಪ್ರತಿಯೋಗಿತಾಕಪ್ರತಿಯೋಗಿತಾವಚ್ಛೇದಕ ಸಂಬಂಧಾವಚ್ಛಿನ್ನ ಪ್ರತಿಯೋಗಿತಾವಚ್ಛೇದಕಾವಚ್ಛಿನ್ನವೈಯಧಿಕರಣ್ಯಾವಚ್ಛಿನ್ನ–(ಪ್ರತಿಯೋಗಿ ವ್ಯಧಿಕರಣ) ಅಭಾವವನ್ನಿರೂಪಿತ ಹೇತುತಾವಚ್ಛೇದಕ ಸಂಬಂಧಾವಚ್ಛಿನ್ನ ವೃತ್ತಿತ್ವಾವಚ್ಛಿನ್ನ ಪ್ರತಿಯೋಗಿತಾಕಾಭಾವಃ" ಸಾಧ್ಯದ ಅಭಾವವುಳ್ಳದ್ದರಲ್ಲಿ ಇಲ್ಲದಿರುವುದು ಎಂದರ್ಥ. ಸಾಧ್ಯವು ಯಾವ ಯಾವ ಸಂಬಂಧದಿಂದ ಎಲ್ಲಿ ಇಲ್ಲವೋ ಅಲ್ಲಿ ಹೇತು ಇರತಕ್ಕ ಸಂಬಂಧದಿಂದ ಇಲ್ಲದಿರುವುದು. ಸಾಧ್ಯದ ಅಭಾವ ಎಂದರೆ ಪ್ರತಯೋಗಿ ಸಾಧ್ಯ. ಪ್ರತಿಯೋಗಿತಾ ಸಾಧ್ಯದಲ್ಲಿ ಇದೆ, ಪ್ರತಿಯೋಗಿತಾ ನಿರೂಪಕವು ಅಭಾವ. ಈ ಸಾಧ್ಯದಲ್ಲಿರುವ ಪ್ರತಿಯೋಗಿತೆಯು ಸಾಧ್ಯತಾವಚ್ಛೇದಕವಾದ ವಹ್ನಿತ್ವದಿಂದಲೂ, ಸಾಧ್ಯತಾವಚ್ಛೇದಕಸಂಬಂಧವಾದ ಸಂಯೋಗದಿಂದಲೂ ಅವಚ್ಛಿನ್ನವಾಗಿರುತ್ತದೆ ಅಂದರೆ ಕೂಡಿರುತ್ತದೆ. ಈ

ಸಾಧ್ಯದ ಅಭಾವ ಪ್ರತಿಯೋಗಿ ವ್ಯಧಿಕರಣವಾಗಿರಬೇಕು. ಪ್ರತಿಯೋಗಿಯಾದ ಸಾಧ್ಯದ ಅಧಿಕರಣದಲ್ಲಿ ಹೇಳಲು ಬರಬಾರದು. ಪ್ರತಿಯೋಗಿಯ ಅಧಿಕರಣಕ್ಕಿಂತ ಬೇರೆಯಾದ ಅಧಿಕರಣದಲ್ಲಿ ಇರುವುದಾಗಬೇಕು. ಈ ರೀತಿಯಾದ ಸಾಧ್ಯಾಭಾವವುಳ್ಳದ್ದು ಕೆರೆ ಮುಂತಾದವು. ಅಲ್ಲಿ ವೃತ್ತಿ ಅಂದರೆ ಇರುವವುಗಳು ನೀರುಪಾಚಿ ಮುಂತಾದವುಗಳು. ಅವು ಹೇತುತಾವಚ್ಛೇದಕ ಸಂಬಂಧ ಅಂದರೆ ಸಂಯೋಗದಿಂದ ಇರುತ್ತವೆ. ವೃತ್ತಿತ್ವಾಭಾವವುಳ್ಳದ್ದು ಧೂಮ. ಸಂಯೋಗಸಂಬಂಧದಿಂದ ಧೂಮ ಕೆರೆಯಲ್ಲಿ ಇಲ್ಲ. ಈ ಲಕ್ಷಣವು ಕೇವಲಾನ್ವಯಿಸ್ಥಳದಲ್ಲಿ ಅಂದರೆ ಸಾಧ್ಯಾಭಾವವುಳ್ಳ ಅಧಿಕರಣವೇ ಅಪ್ರಸಿದ್ಧವಾಗಿರುವ ಸ್ಥಳದಲ್ಲಿ ಬಾರದಿರುವುದರಿಂದ ಸಿದ್ಧಾಂತಲಕ್ಷಣವೇ ನಿರ್ದುಷ್ಟನಾಗಿರುತ್ತದೆ.

**ವ್ಯಾಪ್ಯಸ್ಯ ಪರ್ವತಾದಿವೃತ್ತಿತ್ವಂ ಪಕ್ಷಧರ್ಮತಾ ॥**

ವ್ಯಾಪ್ತಿಗೆ ಆಶ್ರಯವಾದದ್ದು ವ್ಯಾಪ್ಯ. ಅದು ಹೇತುವಾಗುತ್ತದೆ. ಧೂಮದಲ್ಲಿ ವ್ಯಾಪ್ತಿ ಬರುವುದರಿಂದ ಧೂಮವು ವ್ಯಾಪ್ಯ. ಇದರ ಪರ್ವತಾದಿ ವೃತ್ತಿತ್ವ ಅಂದರೆ ಪರ್ವತದಲ್ಲಿರುವಿಕೆ, ಇದೇ ಪಕ್ಷಧರ್ಮತಾ ಆಗುತ್ತದೆ. ಧೂಮ ಪರ್ವದಲ್ಲಿರುವುದು ಎಂಬ ಜ್ಞಾನ ಪಕ್ಷಧರ್ಮತಾ ಜ್ಞಾನವಾಗುತ್ತದೆ.

**ಅನುಮಾನಂ ದ್ವಿವಿಧಂ—ಸ್ವಾರ್ಥಂ ಪರಾರ್ಥಂ ಚ॥ ಸ್ವಾರ್ಥಂ ಸ್ವಾನುಮಿತಿಹೇತುಃ ॥ ತಥಾ ಹಿ— ಸ್ವಯಮೇವ ಭೂಯೋದರ್ಶನೇನ ಯತ್ರ ಯತ್ರ ಧೂಮಸ್ತತ್ರ ತತ್ರಾಗ್ನಿರಿತಿ ಮಹಾನಸಾದೌ ವ್ಯಾಪ್ತಿಂ ಗೃಹೀತ್ವಾ ಪರ್ವತಸಮೀಪಂ ಗತಸ್ತದ್ಗತೇ ಚಾಗ್ನೌ ಸಂದಿಹಾನಃ ಪರ್ವತೇ ಧೂಮಂ ಪಶ್ಯನ್ ವ್ಯಾಪ್ತಿಂ ಸ್ಮರತಿ – ಯತ್ರ ಯತ್ರ ಧೂಮಸ್ತತ್ರಾಗ್ನಿಃ ಇತಿ। ತದನಂತರಂ ವಹ್ನಿವ್ಯಾಪ್ಯಧೂಮವಾನಯಂ ಪರ್ವತ" ಇತಿ ಜ್ಞಾನಮುತ್ಪದ್ಯತೇ । ಅಯಮೇವ ಲಿಂಗಪರಾಮರ್ಶ ಇತ್ಯುಚ್ಯತೇ। ತಸ್ಮಾತ್'ಪರ್ವತೋ ವಹ್ನಿಮಾನಿ' ತಿ ಜ್ಞಾನಮನುಮಿತಿರುತ್ಪದ್ಯತೇ। ತದೇತತ್ ಸ್ವಾರ್ಥಾನುಮಾನಮ್ ॥**

ಸ್ವಾರ್ಥಾನುಮಾನ, ಪರಾರ್ಥಾನುಮಾನ ಎಂದು ಅನುಮಾನ ಎರಡು ವಿಧವಾಗಿದೆ. ತನಗೇ ಅನುಮತಿ ಉಂಟಾಗಲು ಸ್ವಾರ್ಥಾನುಮಾನ ಕಾರಣವಾಗುತ್ತದೆ. ಅದು ಈ ರೀತಿಯಾಗಿರುತ್ತದೆ. ತಾನು ಅಡಿಗೆ ಮನೆ ಮುಂತಾದವುಗಳಲ್ಲಿ ಅನೇಕ ಬಾರಿ ನೋಡಿರುವುದರಿಂದ ಎಲ್ಲೆಲ್ಲಿ ಧೂಮವಿದೆಯೋ ಅಲ್ಲಲ್ಲಿ ಬೆಂಕಿ ಇದೆ. ಎಂಬ ವ್ಯಾಪ್ತಿಯನ್ನು ಚೆನ್ನಾಗಿ ತಿಳಿದಿರುತ್ತಾನೆ. ಈ ವ್ಯಾಪ್ತಿಜ್ಞಾನವನ್ನು ಹೊಂದಿ ಪರ್ವತ ಸಮೀಪಕ್ಕೆಹೋದಾಗ ಪರ್ವತದಲ್ಲಿ ಅಗ್ನಿ ಇದೆಯೋ ಇಲ್ಲವೋ ಎಂಬ ಸಂಶಯ ಬರುತ್ತದೆ. ಆಗ ಅಲ್ಲಿ ಧೂಮವನ್ನು ನೋಡಿದಾಗ (ಎಲ್ಲೆಲ್ಲಿ ಧೂಮವಿದೆಯೋ ಅಲ್ಲಿ ಬೆಂಕಿ ಇದೆ' ಎಂಬ) ವ್ಯಾಪ್ತಿಸ್ಮರಣೆ ಬರುತ್ತದೆ. ಆಮೇಲೆ ವಹ್ನಿವ್ಯಾಪ್ಯವಾದ (ವಹ್ನಿವ್ಯಾಪ್ತಿಯಿಂದ ಕೂಡಿರುವ) ಧೂಮವುಳ್ಳದ್ದು ಈ ಪರ್ವತ ಎಂಬ ಜ್ಞಾನವುಂಟಾಗುತ್ತದೆ. ಈ ಜ್ಞಾನಕ್ಕೇ ಲಿಂಗ ಪರಾಮರ್ಶ ಎನ್ನುತ್ತಾರೆ. ಲೀನವಾದದ್ದನ್ನು (ಅಡಗಿರುವುದನ್ನು) ತಿಳಿಸಿಕೊಡುವುದು ಲಿಂಗ. ಪ್ರಕೃತದಲ್ಲಿ ಲೀನವಾದ (ಸಾಧ್ಯವಾದ) ಬೆಂಕಿಯನ್ನು ತಿಳಿಸಿಕೊಡುವುದರಿಂದ ಧೂಮವು ಲಿಂಗ. ಅದರ ಪರಾಮರ್ಶ ಅಂದರೆ ಜ್ಞಾನವಿಶೇಷ ಎಂದರ್ಥ. ಈ ಲಿಂಗ ಪರಾಮರ್ಶಕ ಜ್ಞಾನದಿಂದ ಪರ್ವತವು ಬೆಂಕಿಯುಳ್ಳದ್ದು' ಎಂಬ ಅನುಮತಿ ರೂಪ ಜ್ಞಾನವು ಹುಟ್ಟುತ್ತದೆ. ಇದಕ್ಕೇ ಸ್ವಾರ್ಥಾನುಮಾನವೆಂದು ಹೆಸರು. ತನಗೆ ಅನುಮತಿ ಬರುವುದಕ್ಕೆ ಉಪಯುಕ್ತವಾದ ಜ್ಞಾನ. ನ್ಯಾಯಾಪ್ರಯೋಜ್ಯವಾದ ಅನುಮಾನ. ಮುಂದೆ ಹೇಳುವ ನ್ಯಾಯ ಪ್ರಯೋಗದ ಆವಶ್ಯಕತೆ ಇಲ್ಲಿ ಬೇಕಾಗಿಲ್ಲ.

**ಯತ್ತು ಸ್ವಯಂ ಧೂಮಾದಗ್ನಿಮನುಮಾಯ ಪರಂ ಪ್ರತಿಬೋಧಯಿತುಂ ಪಂಚಾವಯವವಾಕ್ಯಂ ಪ್ರಯುಜ್ಯತೇ ತತ್ಪ-ರಾರ್ಥಾನುಮಾನಮ್ । ಯಥಾ–ಪರ್ವತೋ ವಹ್ನಿಮಾನ್ । ಧೂಮವತ್ತ್ವಾತ್ । ಯೋ ಯೋ ಧೂಮವಾನ್ ಸ ವಹ್ನಿಮಾನ್, ಯಥಾ ಮಹಾನಸಮ್ । ತಥಾ ಚಾಯಮ್ । ತಸ್ಮಾತ್ತಥೇತಿ । ಅನೇನ ಪ್ರತಿಪಾದಿತಾಲ್ಲಿಂಗಾತ್ಪರೋಽಪ್ಯಗ್ನಿಂ ಪ್ರತಿಪದ್ಯತೇ ॥**

ಇನ್ನೊಬ್ಬನಿಗೆ ಅನುಮಿತಿಯುಂಟಾಗಲು ಸಾಧಕವಾದ ಅನುಮಾನಕ್ಕೆ ಪರಾರ್ಥಾನುಮಾನವೆಂದು ಹೆಸರು. ತಾನು ಧೂಮದಿಂದ ಬೆಂಕಿಯ ಅನು

ಮಿತಿಯನ್ನು ಹೊಂದಿ ಇನ್ನೊಬ್ಬನಿಗೆ ತಿಳಿಸಲು ಯಾವ ಐದು ಅವಯವ ಗಳಿಂದ ಕೂಡಿದ ವಾಕ್ಯವನ್ನು ಪ್ರಯೋಗಿಸುತ್ತಾನೆಯೋ ಅದೇ ಪರಾರ್ಥಾನು ಮಾನ. ವಾಕ್ಯದ ಐದು ಅವಯವಗಳ ಹೆಸರನ್ನು ಮುಂದೆ ಹೇಳುತ್ತಾನೆ. ಈ ಅವಯವ ಪಂಚಕ ಸಮುದಾಯಕ್ಕೆ (ಐದು ಅವಯವಗಳಿಗೆ) ನ್ಯಾಯ ವೆಂದು ಹೆಸರು. ಪ್ರತಿಜ್ಞಾದಿಗಳಲ್ಲಿ ಯಾವುದಕ್ಕಾದರೂ ನ್ಯಾಯಾವಯವ ವೆಂದು ಹೆಸರು. ಈ ನ್ಯಾಯಪ್ರಯೋಜ್ಯವಾದ ಅಂದರೆ ನ್ಯಾಯಪ್ರಯೋಗ ದಿಂದ ತಿಳಿಸುವ ಅನುಮಾನಕ್ಕೆ ಪರಾರ್ಥವೆಂದು ಹೆಸರು. ಪ್ರತಿಜ್ಞಾದಿ ಐದು ಅವಯವಗಳನ್ನು ಹೇಳಿ ತೋರಿಸಿದರೇ ಇನ್ನೊಬ್ಬನಿಗೆ ಅನುಮಿತಿಜ್ಞಾನ ವುಂಟಾಗುತ್ತದೆ.

**ಪ್ರತಿಜ್ಞಾ ಹೇತೂದಾಹರಣೋಪನಯನಿಗಮನಾನಿ ಪಂಚಾವ ಯವಾಃ ॥ 'ಪರ್ವತೋ ವಹ್ನಿಮಾನ್' ಇತಿ ಪ್ರತಿಜ್ಞಾ । 'ಧೂಮ ವತ್ತ್ವಾತ್' ಇತಿ ಹೇತುಃ । 'ಯೋ ಯೋ ಧೂಮವಾನ್ ಸ ಸ ವಹ್ನಿಮಾನ್ ಯಥಾ ಮಹಾನಸಮ್' ಇತ್ಯುದಾಹರಣಮ್ । 'ತಥಾ ಚಾಯಂ' ಇತ್ಯುಪನಯಃ । 'ತಸ್ಮಾತ್ತಥಾ' ಇತಿ ನಿಗಮನಮ್ ॥**

ಐದು ಅವಯವ ವಾಕ್ಯಗಳನ್ನು ಉದಾಹರಿಸುತ್ತಾನೆ. ಪ್ರತಿಜ್ಞಾ. ಹೇತು, ಉದಾಹರಣ. ಉಪನಯ. ನಿಗಮನ ಎಂದು ನ್ಯಾಯದ ಐದು ಅವಯವಗಳ ಹೆಸರು. ಈ ಐದರ ಸ್ವರೂಪವನ್ನು ತೋರಿಸುತ್ತಾನೆ. ಪರ್ವತವು ಬೆಂಕಿಯುಳ್ಳದ್ದು' ಎಂಬ ವಾಕ್ಯಕ್ಕೆ 'ಪ್ರತಿಜ್ಞಾ' ಎಂದು ಹೆಸರು. ಸಾಧ್ಯದಿಂದ ಕೂಡಿರುವ ಪಕ್ಷವನ್ನು ಹೇಳುವ ವಾಕ್ಯ. (ಸಾಧ್ಯ ವಿಶಿಷ್ಟ ಪಕ್ಷಬೋಧಕವಚನಂ) 'ಧೂಮವಿರುವುದರಿಂದ' ಎಂಬುದು ಹೇತು ರೂಪ ಅವಯವ. ಪಂಚಮ್ಯಂತವಾಗಿ ಅಥವಾ ತೃತೀಯಾಂತವಾಗಿ ಲಿಂಗ ವನ್ನು ಹೇಳುವ ವಚನವು ಹೇತು. 'ಯಾವುದು ಯಾವುದು ಧೂಮದಿಂದ ಕೂಡಿದೆಯೋ ಅದೆಲ್ಲಾ ಬೆಂಕಿಯುಳ್ಳದ್ದು, ಹೇಗೆಂದರೆ ಅಡಿಗೆ ಮನೆ' ಎಂದು ಪ್ರಯೋಗಿಸಿದರೆ ಉದಾಹರಣ ವಾಕ್ಯವಾಗುತ್ತದೆ. ವ್ಯಾಪ್ತಿಪ್ರತಿ ಪಾದಕವಾದ ದೃಷ್ಟಾಂತ ವಚನಕ್ಕೆ ಉದಾಹರಣವೆಂದು ಹೆಸರು. (ಪ್ರಕೃತ

ಹೇತುವಿರುವಲ್ಲಿ ಪ್ರಕೃತ ಹೇತುವ್ಯಾಪಕವಾದ ಸಾಧ್ಯ ಬೋಧಕವಾಕ್ಯ.) 'ಈ ಪರ್ವತವೂ ವಹ್ನಿವ್ಯಾಪ್ಯಧೂಮವುಳ್ಳದ್ದು' ಎಂಬ ವಾಕ್ಯವೇ ಉಪನಯ 'ವಹ್ನಿವ್ಯಾಪ್ಯದೂಮವಿರುವುದರಿಂದ ವಹ್ನಿಉಳ್ಳದ್ದು' ಎಂಬ ವಾಕ್ಯಕ್ಕೆ ನಿಗಮನ ಎಂದು ಹೆಸರು. ಪಕ್ಷದಲ್ಲಿ ಹೇತುವೂ ಸಾಧ್ಯವೂ ಅಬಾಧಿತವಾಗಿವೆ ಎಂದು ತಿಳಿಸುವ ವಾಕ್ಯ. ಇವುಗಳಲ್ಲಿ ಪಕ್ಷಜ್ಞಾನದಿಂದ ಪ್ರತಿಜ್ಞಾವಾಕ್ಯವೂ, ಲಿಂಗಜ್ಞಾನದಿಂದ ಹೇತುವಾಕ್ಯವೂ, ವ್ಯಾಪ್ತಿಜ್ಞಾನದಿಂದ ಉದಾಹರಣ ವಾಕ್ಯವೂ, ಪಕ್ಷಧರ್ಮತಾಜ್ಞಾನದಿಂದ ಉಪನಯವಾಕ್ಯವೂ, ಅಬಾಧಿತ ತ್ವಾದಿಜ್ಞಾನದಿಂದ ನಿಗಮನವಾಕ್ಯವೂ ತಿಳಿಯುತ್ತದೆ.

**ಸ್ವಾರ್ಥಾನುಮಿತಿ ಪರಾರ್ಥಾನುಮಿತ್ಯೋರ್ಲಿಂಗಪರಾಮರ್ಶ ಏವ ಕರಣಮ್ । ತಸ್ಮಾಲ್ಲಿಂಗಪರಾಮರ್ಶೋಽನುಮಾನಮ್ ॥**

ಸ್ವಾರ್ಥಾನುಮಿತಿ, ಪರಾರ್ಥಾನುಮಿತಿ ಇವೆರಡಕ್ಕೂ ಲಿಂಗಪರಾ ಮರ್ಶವೇ ಕರಣವಾಗುತ್ತದೆ. ಆದುದರಿಂದ ಲಿಂಗಪರಾಮರ್ಶವೇ ಅನುಮಾನ ವಾಗುತ್ತದೆ. ಜ್ಞಾನಕ್ಕೆ ವಿಷಯವಾದ ಅಂದರೆ ಈಗ ತಿಳಿಯುತ್ತಿರುವ ಧೂಮವೇ ಅನುಮಿತಿಕರಣವೆಂದು ಪ್ರಾಚೀನರು ಹೇಳುತ್ತಾರೆ. ಇದು ಸರಿ ಯಲ್ಲ. ಈ ಯಜ್ಞಶಾಲೆ ವಹ್ನಿಯುಳ್ಳದ್ದಾಗಿದೆ. ಹಿಂದೆ ಧೂಮ ಇದ್ದುದರಿಂದ ಎಂಬ ಅನುಮಾನದಲ್ಲಿ ಜ್ಞಾಯಮಾನ ಲಿಂಗವಿಲ್ಲ. ಧೂಮ ಹಿಂದಿಇದ್ದು ದರಿಂದ ಆ ಧೂಮದ ಜ್ಞಾನದಿಂದ ಅನುಮಿತಿ ಬರುತ್ತದೆ. ಆದುದರಿಂದ ಲಿಂಗವಿಶೇಷಜ್ಞಾನವೇ ಅನುಮಿತಿಕರಣ. ವಿಶೇಷಜ್ಞಾನ ಎಂದುದರಿಂದ ಇದು ಮೂರನೆಯ ಜ್ಞಾನವಾಗಿರುತ್ತದೆ. ಅಡಿಗೆಮನೆಯಲ್ಲಿ ಧೂಮವಹ್ನಿ (ಬೆಂಕಿ) ಗಳಿಗೆ ವ್ಯಾಪ್ತಿ ತಿಳಿಯಲು ಬೇಕಾಗುವ ಧೂಮಜ್ಞಾನವು ಮೊದ ಲನೆಯ ಜ್ಞಾನ. ಪರ್ವತರೂಪ ಪಕ್ಷದಲ್ಲಿ ತೋರುವ ದೂಮಜ್ಞಾನವು ಎರಡನೆಯಜ್ಞಾನ. ಅದೇ ಪಕ್ಷದಲ್ಲಿ ವಹ್ನಿಸಾಧ್ಯದಿಂದ ವ್ಯಾಪ್ಯವಾಗಿ ತೋರುವ ದೂಮಜ್ಞಾನವು ಮೂರನೆಯಜ್ಞಾನ. ಇದನ್ನೇ ಲಿಂಗಪರಾಮರ್ಶ ಎನ್ನುತ್ತಾರೆ. ಇದು ಅನುಮಿತಿಗೆ ಕರಣ. ವ್ಯಾಪಾರದಿಂದ ಕೂಡಿ ಅಸಾ ಧಾರಣಕಾರಣವಾದದ್ದು ಕರಣ ಎಂದು ಹೇಳುವುದಾದರೆ ಈ ಲಿಂಗಪರಾ ಮರ್ಶ ವ್ಯಾಪಾರವಾಗಿ ವ್ಯಾಪ್ತಿಜ್ಞಾನವೇ ಕರಣವಾಗುತ್ತದೆ.

**ಲಿಂಗಂ ತ್ರಿವಿಧಮ್-ಅನ್ವಯ ವ್ಯತಿರೇಕಿ, ಕೇವಲಾನ್ವಯಿ, ಕೇವಲವ್ಯತಿರೇಕಿ ಚೇತಿ ॥ ಅನ್ವಯೇನ ವ್ಯತಿರೇಕೇಣಚ ವ್ಯಾಪ್ತಿ ಮದನ್ವಯ ವ್ಯತಿರೇಕಿ, ಯಥಾ ವಹ್ನೌ ಸಾಧ್ಯೇ ಧೂಮವತ್ವಮ್ । ಯತ್ರ ಧೂಮಸ್ತತ್ರಾಗ್ನಿರ್ಯಥಾ ಮಹಾನಸಮಿತ್ಯನ್ವಯ ವ್ಯಾಪ್ತಿಃ । ಯತ್ರವಹ್ನಿರ್ನಾಸ್ತಿ ತತ್ರ ಧೂಮೋಽಪಿ ನಾಸ್ತಿ. ಯಥಾ ಹ್ರದ ಇತಿ ವ್ಯತಿರೇಕವ್ಯಾಪ್ತಿಃ ॥**

ಅನ್ವಯವ್ಯತಿರೇಕಿ, ಕೇವಲಾನ್ವಯಿ, ಕೇವಲವ್ಯತಿರೇಕಿ ಎಂದು ಹೇತು (ಲಿಂಗ) ಮೂರು ವಿಧವಾಗಿದೆ. 'ಅನ್ವಯೇನ—'ವಾಕ್ಯದಿಂದ ಅನ್ವಯ ವ್ಯತಿರೇಕಿಹೇತುಲಕ್ಷಣ ಹೇಳುತ್ತಾನೆ. ಅನ್ವಯವ್ಯಾಪ್ತಿಯಿಂದಲೂ, ವ್ಯತಿರೇಕ ವ್ಯಾಪ್ತಿಯಿಂದಲೂ, ಕೂಡಿರುವ ಹೇತು ಅನ್ವಯವ್ಯತಿರೇಕಿ ಯಾಗಿರುತ್ತದೆ. ಹೇತುಸಾಧ್ಯಗಳವ್ಯಾಪ್ತಿ ಅನ್ವಯವ್ಯಾಪ್ತಿ. ಧೂಮವ್ಯಾಪಕ ವಹ್ನಿಸಾಮಾನಾಧಿಕರಣ್ಯರೂಪ ವ್ಯಾಪ್ತಿಉಳ್ಳದ್ದು. ಇದು ಹಿಂದೆ ವಿವೃತ ವಾಗಿದೆ. ಹೇತ್ವಭಾವ ಸಾಧ್ಯಾಭಾವಗಳ ವ್ಯಾಪ್ತಿ ವ್ಯತಿರೇಕವ್ಯಾಪ್ತಿ. ವ್ಯತಿರೇಕ ಅಂದರೆ ಅಭಾವ. ಪ್ರಕೃತ ಸಾಧ್ಯಾಭಾವ ಹೇತ್ವಭಾವ ಆಗುತ್ತದೆ.

ಎಲ್ಲೆಲ್ಲಿ ಬೆಂಕಿಯ ಅಭಾವ ಇದೆಯೋ (ವಹ್ನ್ಯಭಾವ= ಬೆಂಕಿ ಇಲ್ಲ ದಿರುವುದು) ಅಲ್ಲಲ್ಲಿ ಧೂಮದ ಅಭಾವಇರುತ್ತದೆ' ಎಂಬುದೇ ಇದರಸ್ವರೂಪ. ವಹ್ನ್ಯಭಾವ ಇದ್ದಲ್ಲಿ ಎಲ್ಲಾಕಡೆ ಧೂಮಾಭಾವ ಎಂದುದರಿಂದ ವಹ್ನ್ಯ ಭಾವಕ್ಕೆ ಧೂಮಾಭಾವವು ವ್ಯಾಪಕ ಎಂದು ತಿಳಿಯುತ್ತದೆ. ವಹ್ನ್ಯಭಾವ ದಲ್ಲಿ ವ್ಯಾಪ್ತಿ ಬರುತ್ತದೆ. ಇದು ಸ್ವಾಶ್ರಯೀಭೂತಾಭಾವಪ್ರತಿಯೋಗಿತ್ವ ಸಂಬಂಧದಿಂದ ಧೂಮದಲ್ಲಿಯೂ ಬರುವುದರಿಂದ ಧೂಮವು ವ್ಯತಿರೇಕ ವ್ಯಾಪ್ತಿಯಿಂದ ಕೂಡಿರುತ್ತದೆ, ಸ್ವಂ= ವ್ಯತಿರೇಕವ್ಯಾಪ್ತಿ. ಸ್ವಾಶ್ರಯೀ ಭೂತ (ಇದಕ್ಕೆ ಆಶ್ರಯ) = ವಹ್ನ್ಯಭಾವ. ಅದಕ್ಕೆ ವ್ಯಾಪಕವಾದ ಅಭಾವ (ವ್ಯಾಪಕೀಭೂತಾಭಾವ) ಧೂಮಾಭಾವ. ಧೂಮಾಭಾವದ ಪ್ರತಿಯೋಗಿ ಧೂಮ. ಪ್ರತಿಯೋಗಿತ್ವ ಸಂಬಂಧದಿಂದ ವ್ಯತಿರೇಕವ್ಯಾಪ್ತಿಯುಳ್ಳದ್ದು ಧೂಮ. ಧೂಮವ್ಯಾಪಕವಹ್ನಿಸಾಮಾನಾಧಿಕರಣ್ಯರೂಪ ಅನ್ವಯವ್ಯಾಪ್ತಿಯಿಂದಲೂ ಕೂಡಿರುವುದರಿಂದ ಅನ್ವಯವ್ಯತಿರೇಕಿ ಹೇತುವು ಧೂಮವಾಗುತ್ತದೆ.

' ವಹ್ನ್ಯಭಾವವ್ಯಾಪಕೀ ಭೂತಾಭಾವ ಪ್ರತಿಯೋಗಿ ಧೂಮವಾನ್ ಪರ್ವತಃ' ಎಂಬುದು ವ್ಯತಿರೇಕ ವ್ಯಾಪ್ತಿಯ ಪರಾಮರ್ಶ. ವಹ್ನ್ಯಭಾವಕ್ಕೆ ವ್ಯಾಪಕ ಧೂಮಾಭಾವ. ಅಭಾವಕ್ಕೆ ಪ್ರತಿಯೋಗಿ ಧೂಮ. ಆಧೂಮವುಳ್ಳದ್ದು ಪರ್ವತ. ಈ ಅನ್ವಯವಾಪ್ತಿ ವ್ಯತಿರೇಕವ್ಯಾಪ್ತಿಯ ಸ್ವರೂಪವನ್ನು ತೋರಿಸುತ್ತಾನೆ. ' ಎಲ್ಲಿ ಧೂಮವಿದೆಯೋ ಅಲ್ಲಿ ಬೆಂಕಿ ಇದೆ. ಹೇಗೆಂದರೆ ಅಡಿಗೆಮನೆ " ಇದು ಅನ್ವಯವ್ಯಾಪ್ತಿ ' ಎಲ್ಲಿ ಬೆಂಕಿ ಇಲ್ಲವೋ ಅಲ್ಲಿ ಹೊಗೆಯೂ ಇಲ್ಲ. ಹೇಗೆಂದರೆ ಕೊಳ. ' ಇದು ವ್ಯತಿರೇಕವ್ಯಾಪ್ತಿ. ಇದು ಹಿಂದೆ ವಿವರವಾಗಿ ಹೇಳಿದೆ.

**ಅನ್ವಯಮಾತ್ರವ್ಯಾಪ್ತಿಕಂ ಕೇವಲಾನ್ವಯಿ। ಯಥಾ ಘಟೋ ಭಿಧೇಯಃ ಪ್ರಮೇಯತ್ವಾತ್ಪಟವತ್ । ಅತ್ರಪ್ರಮೇಯತ್ವಾಭಿ ಧೇಯತ್ವಯೋರ್ವ್ಯತಿರೇಕವ್ಯಾಪ್ತಿರ್ನಾಸ್ತಿ ಸರ್ವಸ್ಯಾಪಿ ಪ್ರಮೇಯ ತ್ವಾದಭಿ ಧೇಯತ್ವಾಚ್ಚ ॥**

ಕೇವಲಾನ್ವಯಿ ಹೇತುವಿನ ಲಕ್ಷಣ ಹೇಳುತ್ತಾನೆ. ಕೇವಲ ಅನ್ವಯ ವ್ಯಾಪ್ತಿಯಿಂದ ಕೂಡಿರುವ ಹೇತುವು ಕೇವಲಾನ್ವಯಿ. ಅದರ ಸ್ವರೂಪ ತೋರಿಸುತ್ತಾನೆ. 'ಘಟವು ಅಭಿಧೇಯ (ವಾಚ್ಯ), ಪ್ರಮೇಯವಾದುದರಿಂದ, ಪಟದಂತೆ ' ಪ್ರಮೇಯತ್ವ ಹೇತುವಿಗಾಗಲೀ ಅಭಿಧೇಯತ್ವ ಸಾಧ್ಯಕ್ಕಾಗಲೀ ವ್ಯತಿರೇಕವ್ಯಾಪ್ತಿ ಹೇಳಲು ಬರುವುದಿಲ್ಲ. ಪ್ರಪಂಚದ ಪದಾರ್ಥಗಳೆಲ್ಲವೂ ಪ್ರಮೇಯ, ಅಭಿಧೇಯಗಳಾಗಿವೆ. ಅಲ್ಲಿ ಪ್ರಮೇಯತ್ವ, ಅಭಿಧೇಯತ್ವ ಇದ್ದೇ ಇರುತ್ತದೆ. ಕೇವಲಾನ್ವಯಿ ಸಾಧ್ಯದಿಂದ ಕೂಡಿರುವ ಹೇತುವೇ ಕೇವಲಾನ್ವಯಿ. ಅತ್ಯಂತಾಭಾವಾಪ್ರತಿಯೋಗಿತ್ವರೂಪವಾದ ಕೇವಲಾನ್ವಯಿತ್ವವು ಸಾಧ್ಯದಲ್ಲಿ ಬರುತ್ತದೆ. ಸಾಧ್ಯ ಅಭಿಧೇಯತ್ವ. ಅಭಿಧೇಯ ಯತ್ವಾಭಾವ ಇಲ್ಲವೇಇಲ್ಲ. ಎಲ್ಲವೂಪ್ರಮೇಯವಾದುದರಿಂದ ಪ್ರಮೇಯತ್ವಾಧಿಕರಣವಾದ ಸಕಲದಲ್ಲಿ ಅಭಿಧೇಯತ್ವ ಇದ್ದೇ ಇದೆ. ಅಭಾವಾಪ್ರತಿಯೋಗಿತ್ವವುಅಭಿಧೇಯತ್ವಕ್ಕೆ ಬರುತ್ತದೆ. ಆದುದರಿಂದ ಅಭಾವಾಪ್ರತಿಯೋಗಿ ಸಾಧ್ಯಕತ್ವಂ (ಸಾಧ್ಯ ವಿಶಿಷ್ಟವಾದದ್ದು) ಕೇವಲಾನ್ವಯಿ ಹೇತುವಿನ ಲಕ್ಷಣವಾಗುತ್ತದೆ. ಹೀಗೆ ಹೇಳಿರುವುದರಿಂದ ಹೇತುವು ಅತ್ಯಂತಾಭಾವ ಪ್ರತಿಯೋಗಿಯಾದರೂ ಲಕ್ಷಣ ಬಂದೇ ಬರುತ್ತದೆ. ಸಾಧ್ಯ ಕೇವಲಾನ್ವಯಿಯಾದ್ದರಿ

ರಿಂದ (ಅತ್ಯಂತಾಭಾವಾಪ್ರತಿಯೋಗಿಯಾದುದರಿಂದ) ವ್ಯತಿರೇಕವ್ಯಾಪ್ತಿ ಬರುವುದಿಲ್ಲ. ಸಾಧ್ಯಾಭಾವ ಹೇಳಲು ಬಂದರೆ ವ್ಯತಿರೇಕವ್ಯಾಪ್ತಿ ಹೇಳಬಹುದು. ಸಾಧ್ಯಾಭಾವವೇ ಅಪ್ರಸಿದ್ಧವಾದುದರಿಂದ ಸಾಧ್ಯಾಭಾವದಿಂದ ಕೂಡಿಹೇಳುವ ವ್ಯತಿರೇಕವ್ಯಾಪ್ತಿಯೂ ಬರುವುದಿಲ್ಲ. 'ಅತ್ಯಂತಾಭಾವಾಪ್ರತಿಯೋಗಿತ್ವಂ' ಎಂಬ ಕೇವಲಾನ್ವಯಿತ್ವಕ್ಕೆ ಸ್ವವಿರೋಧಿವೃತ್ತಿಮದತ್ಯಂತಾಭಾವಾಪ್ರತಿಯೋಗಿತ್ವಂ' ಎಂದು ಪರಿಷ್ಕಾರ ಮಾಡಬೇಕು. ಇಲ್ಲವಾದರೆ ಆಕಾಶಾಭಾವ, ಸಂಯೋಗಾಭಾವಗಳಲ್ಲಿ ಅವ್ಯಾಪ್ತಿ ಬರುತ್ತದೆ. ತನಗೆ ವಿರೋಧಿಯಾಗಿ ಇರತಕ್ಕ ಯಾವ ಅಭಾವ ಇವೆಯೋ ಅದರ ಪ್ರತಿಯೋಗಿಯಾಗದಿರುವುದು. ಸ್ವಂ-ಘಟಃ ಇದಕ್ಕೆ ವಿರೋಧಿಯಾದ, ಇರತಕ್ಕ ಅಭಾವವೆಂದರೆ ಘಟಾಭಾವ. ಅದಕ್ಕೆ ಪ್ರತಿಯೋಗಿ ಘಟ. ಪ್ರತಿಯೋಗಿ ಭಿನ್ನವಾಗಿರುವುದು ಪ್ರತಿಯೋಗಿಯಾಗದಿರುವುದು ಅಭಿಧೇಯತ್ವ, ಪ್ರಮೇಯತ್ವವಾಗುತ್ತವೆ. ಆಕಾಶಾಭಾವ ಆಕಾಶಕ್ಕೆ ವಿರೋಧಿಯಾದರೂ ಅದು ವೃತ್ತಿಮತ್ತಾಗುವುದಿಲ್ಲ. ಆಕಾಶಾಭಾವ ಇದೆಯೆಂದು ಹೇಳಲು ಬರುವುದಿಲ್ಲ. ಸಂಯೋಗಾಭಾವ ಇದ್ದರೂ ಸಂಯೋಗಕ್ಕೆ ವಿರೋಧವಲ್ಲ. ಒಂದೇ ಕಡೆ ಸಂಯೋಗವೂ ಸಂಯೋಗಾಭಾವವೂ ಬರಬಹುದು. ತನ್ನ ಅಧಿಕರಣದಲ್ಲಿ ಇಲ್ಲದಿರುವ ಅಭಾವವಾಗಬೇಕು. ಘಟ ಇದ್ದಲ್ಲಿ ಘಟಾಭಾವ ಇರುವುದಿಲ್ಲ. ಸಂಯೋಗ ಇದ್ದಲ್ಲಿ ಸಂಯೋಗಾಭಾವ ಇರುವುದರಿಂದ ಅದು ಸ್ವವಿರೋಧಿಯಾಗುವುದಿಲ್ಲ. ಯಾವುದಾದರೂ ಒಂದು ಸಂಬಂಧದಿಂದ ಎಲ್ಲಾ ಕಡೆ ಇರುವುದೇ ಕೇವಲಾನ್ವಯಿ ಎಂದು ನವೀನರು ಹೇಳುತ್ತಾರೆ. ಅಭಿಧೇಯತ್ವವು ಎಲ್ಲಾ ಕಡೆಯಲ್ಲಿಯೂ ಇರುತ್ತದೆ. ಅದು ಇಲ್ಲದಿರುವ ಸ್ಥಳವೇ ಇಲ್ಲ.

**ವ್ಯತಿರೇಕಮಾತ್ರವ್ಯಾಪ್ತಿಕಂ ಕೇವಲವ್ಯತಿರೇಕಿ। ಯಥಾ ಪೃಥಿವೀ ಇತರೇಭ್ಯೋ ಭಿದ್ಯತೇ ಗಂಧವತ್ತ್ವಾತ್ । ಯದಿತರೇಭ್ಯೋ ನ ಭಿದ್ಯತೇ ನ ತದ್ಗಂಧವತ್ । ಯಥಾ ಜಲಮ್ । ನ ಚೇಯಂ ತಥಾ । ತಸ್ಮಾನ್ನತಥೇತಿ । ಅತ್ರ ಯದ್ಗಂಧವತ್ ತದಿತರಭಿನ್ನಮಿತ್ಯನ್ವಯದೃಷ್ಟಾಂತೋ ನಾಸ್ತಿ । ಪೃಥಿವೀ ಮಾತ್ರಸ್ಯ ಪಕ್ಷತ್ವಾತ್ ॥**

ಕೇವಲ ವ್ಯತಿರೇಕಿಲಕ್ಷಣ ಹೇಳುತ್ತಾನೆ. ವ್ಯತಿರೇಕವ್ಯಾಪ್ತಿಮಾತ್ರ ಯಾವುದಕ್ಕಿದೆಯೋ ಆ ಹೇತು ಕೇವಲವ್ಯತಿರೇಕಿ. ಅದರ ಸ್ವರೂಪ. ಪ್ರಥಿವಿಯು ಜಲಾದಿಗಳಿಂದ ಬೇರೆಯಾಗುತ್ತದೆ. ಗಂಧವಿರುವುದರಿಂದ' ಯಾವುದು ಜಲಾದಿಗಳಿಗಿಂತ ಬೇರೆಯಾಗುವುದಿಲ್ಲವೋ ಅದು ಗಂಧವುಳ್ಳದ್ದಾಗುವುದಿಲ್ಲ. ಹೇಗೆಂದರೆ ಜಲ. (ನೀರು) ಪೃಥಿವಿಯು ಹಾಗಾಗುವುದಿಲ್ಲ. (ಗಂಧಾಭಾವವುಳ್ಳದ್ದಲ್ಲ) ಆದುದರಿಂದ ಗಂಧಾಭಾವ ಇಲ್ಲದಿರುವುದರಿಂದ ಇತರ ಭೇದಾಭಾವವುಳ್ಳದ್ದೂ ಆಗುವುದಿಲ್ಲ. ಅನ್ವಯವ್ಯಾಪ್ತಿ ಏಕೆ ಬರುವುದಿಲ್ಲವೆಂದು ತೋರಿಸುತ್ತಾನೆ. ಅತ್ರ ಯದಿತಿ— ಇಲ್ಲಿ (ಇತರಭೇದವನ್ನು ಸಾಧಿಸುವ ಅನುಮಾನದಲ್ಲಿ) ಯಾವುದು ಗಂಧವುಳ್ಳದ್ದೋ ಅದು ಇತರ ಭೇದವುಳ್ಳದ್ದು ಎಂದು ಹೇಳಲು ಅನ್ವಯ ದೃಷ್ಟಾಂತವೇ ಸಿಗುವುದಿಲ್ಲ. ಗಂಧವುಳ್ಳ ಪೃಥಿವಿ ಯಾವುದೋ ಅದೆಲ್ಲಾ ಪಕ್ಷವೇ ಆಗಿರುತ್ತದೆ.

ಅನ್ವಯವ್ಯಾಪ್ತಿಶೂನ್ಯವಾಗಿ ವ್ಯತಿರೇಕವ್ಯಾಪ್ತಿ ಉಳ್ಳದ್ದು ಕೇವಲ ವ್ಯತಿರೇಕಿ. ಪೃಥಿವೀ ಇತರೇಭ್ಯೋ ಭಿದ್ಯತೇ । ಗಂಧವತ್ತ್ವಾತ್ । ಎಂಬಲ್ಲಿ ಪೃಥಿವೀತ್ವಧರ್ಮದಿಂದ ಕೂಡಿರುವು (ಪೃಥಿವೀತ್ವಾವಚ್ಛಿನ್ನಂ) ದೆಲ್ಲವೂ ಪಕ್ಷ. ಪೃಥಿವಿಗಿಂತ ಬೇರೆಯಾದ ಜಲಾದಿ ಎಂಟರಭೇದ ಸಾಧ್ಯ. (ಇತರೇಭ್ಯೋ ಭಿದ್ಯತೇ ಎಂಬುದರ ಅರ್ಥ ಜಲವಲ್ಲ, ತೇಜಸ್ಸಲ್ಲ, ವಾಯುವಲ್ಲ ಇತ್ಯಾದಿ ಅದರ ಆಕಾರ) ಗಂಧವತ್ತ್ವಂ (ಗಂಧ) ಹೇತು. ಇಲ್ಲಿ "ಯಾವುದು ಗಂಧವುಳ್ಳದ್ದೋ ಅದು ಇತರಭೇದವುಳ್ಳದ್ದು" ಎಂದು ತೋರಿಸಲು ಅನ್ವಯ ದೃಷ್ಟಾಂತ ಇಲ್ಲ. ಗಂಧವು ಹೇತು. ಅದಕ್ಕೆ ವ್ಯಾಪಕವಾದದ್ದು ಇತರ ಭೇದ. ಇತರ ಭೇದ ಸಾಮಾನಾಧಿಕರಣ್ಯವು ಗಂಧಕ್ಕೆ ಇಲ್ಲ. ಆದುದರಿಂದ ಗಂಧವ್ಯಾಪಕ ಇತರ ಭೇದಸಾಮಾನಾಧಿಕರಣ್ಯ (ಗಂಧವ್ಯಾಪಕ ಇತರ ಭೇದವಿದ್ದಲ್ಲಿ ಗಂಧವಿರುವಿಕೆ) ರೂಪ ಅನ್ವಯ ವ್ಯಾಪ್ತಿಯು ಹುಟ್ಟುವುದಿಲ್ಲ. ಆದರೆ "ಎಲ್ಲೆಲ್ಲಿ ಪೃಥಿವೀತರಭೇದ ಇಲ್ಲವೋ ಅಲ್ಲಲ್ಲಿ ಗಂಧಾಭಾವ ಇದೆ. ಜಲಾದಿಗಳಂತೆ" (ಜಲ,ಮುಂತಾದುವುಗಳಲ್ಲಿ ಇದು ಬರುತ್ತದೆ) ಎಂಬ ವ್ಯತಿರೇಕ ದೃಷ್ಟಾಂತ ಸಿಗುತ್ತದೆ. ಜಲ ಮುಂತಾದವುಗಳಲ್ಲಿ ಗಂಧವಿಲ್ಲ. ಗಂಧಾಭಾವ ಇದೆ. ಆದುದರಿಂದ ಪೃಥಿವಿಗಿಂತ ಇತರಗಳಾದ ಜಲಾದಿಭೇದವೂ

ಇಲ್ಲ. ಜಲವು ಜಲವಲ್ಲ ಎಂಬ ಭೇದ ಬರುವುದಿಲ್ಲ. ಅನ್ವಯದಲ್ಲಿರುವ ಹೇತು ಸಾಧ್ಯಭಾವವು ವ್ಯತಿರೇಕದಲ್ಲಿ ವ್ಯತ್ಯಾಸವಾಗುತ್ತದೆ. ಸಾಧ್ಯಾಭಾವವು ವ್ಯಾಪ್ಯವೂ ಹೇತ್ವಭಾವವು ವ್ಯಾಪಕವೂ ಆಗುತ್ತದೆ. ಇಲ್ಲಿ ಇತರಭೇದಾಭಾವ ರೂಪ ಸಾಧ್ಯಾಭಾವ ವ್ಯಾಪ್ಯವಾಗಿದೆ. ಈ ಇತರ ಭೇದಾಭಾವಕ್ಕೆ ಗಂಧಾಭಾವ ವ್ಯಾಪಕವಾಗುತ್ತದೆ. ಇತರಭೇದಾಭಾವವ್ಯಾಪಕತ್ವವು ಗಂಧಾಭಾವದಲ್ಲಿ ತೋರುತ್ತದೆ. ಇದನ್ನೇ ಮನಸ್ಸಿನಲ್ಲಿಟ್ಟುಕೊಂಡು ಗ್ರಂಥ ಕಾರನು"ಯಾವುದು ಇತರಕ್ಕಿಂತ ಬೇರೆಯಾಗುವುದಿಲ್ಲವೋ ಅದು ಗಂಧವುಳ್ಳದ್ದಾಗುವುದಿಲ್ಲ. ಜಲದಂತೆ" (ಯದಿತ-ಜಲಮ್) ಎಂದು ವ್ಯತಿರೇಕವ್ಯಾಪ್ತಿಯನ್ನು ತೋರಿಸಿರುತ್ತಾನೆ. ಹೀಗೆ ವ್ಯತಿರೇಕವ್ಯಾಪ್ತಿಜ್ಞಾನ ಬಂದ ಮೇಲೆ " ಇತರಭೇದಾಭಾವವ್ಯಾಪಕೀಭೂತಾಭಾವಪ್ರತಿಯೋಗಿಗಂಧವತೀ ಪೃಥಿವೀ" ಎಂಬ ವ್ಯತಿರೇಕಿಪರಾಮರ್ಶ ಬರುತ್ತದೆ. ಇತರಭೇದಾಭಾವಕ್ಕೆ ವ್ಯಾಪಕವಾದ ಅಭಾವ ಗಂಧಾಭಾವ. ಅದಕ್ಕೆ ಪ್ರತಿಯೋಗಿ ಗಂಧ. ಅದು ಉಳ್ಳದ್ದು ಪೃಥಿವೀ ಆಗುತ್ತದೆ. ಈ ಪರಾಮರ್ಶದಿಂದ 'ಪೃಥಿವೀ ಇತರ ಭೇದವತೀ"= ಪೃಥಿವಿಯು ಜಲಾದಿ ಇತರ ಭೇದವುಳ್ಳದ್ದು" ಎಂದು ಅನುಮತಿ ಉಂಟಾಗುತ್ತದೆ. ಇಲ್ಲಿ ಪೃಥಿವೀತ್ವಾಚ್ಛಿನ್ನ= ಪೃಥಿವೀತ್ವದಿಂದ ಕೂಡಿರುವುದೆಲ್ಲಾ ಉದ್ದೇಶ್ಯವಾಗಿಯೂ, ಇತರ ಭೇದತ್ವಾವಚ್ಛಿನ್ನ= ಇತರ ಭೇದವೆಲ್ಲಾ ವಿಧೇಯವಾಗಿಯೂ ತೋರುವುದರಿಂದ ಪೃಥಿವೀತ್ವಾವಚ್ಛಿನ್ನೋದ್ದೇಶ್ಯತಾನಿರೂಪಿತ ಇತರ ಭೇದತ್ವಾವಚ್ಛಿನ್ನವಿಧೇಯತಾನಿರೂಪಕ ಅನುಮಿತಿಯಾಗುತ್ತದೆ. ವಿಧೇಯತೆಯನ್ನು ನಿರೂಪಿಸುವುದು ಅನುಮಿತಿ. ಉದ್ದೇಶ್ಯತೆಯನ್ನು ನಿರೂಪಿಸುವುದು ವಿಧೇಯತಾ ಆಗುತ್ತದೆ. ಯಥಾ ಜಲಂ ಎಂಬುದಕ್ಕೆ ಹೀಗೆ ವಿವರಣೆ ಹೇಳಬೇಕು. ಜಲವು ಇತರಭೇದದ ಅಭಾವದಿಂದ ಕೂಡಿದೆ. ಇತರ ಭೇದಾಭಾವಕ್ಕೆ ವ್ಯಾಪಕವಾದ ಗಂಧದ ಅಭಾವದಿಂದಲೂ ಕೂಡಿದೆ. ಹೀಗೆ ಹೇಳಿರುವುದರಿಂದ ಗಂಧಾಭಾವದಿಂದ ನಿರೂಪಿತವಾದ ವ್ಯಾಪ್ಯತೆಯು ಇತರಭೇದಾಭಾವದಲ್ಲಿ ಗೃಹೀತವಾಗುತ್ತದೆ. "ನ ಚೇಯಂ ತಥಾ" ಇಯಂ =ಪೃಥಿವಿಯು ತಥಾ= ಇತರ ಭೇದಾಭಾವ ವ್ಯಾಪಕಗಂಧಾಭಾವವುಳ್ಳದ್ದು ನ =ಆಗುವುದಿಲ್ಲ. ಆದರೆ ಗಂಧಾಭಾವಾಭಾವ ಉಳ್ಳದ್ದು. ಗಂಧದ ಅಭಾವದ ಅಭಾವ ಅಂದರೆ ಗಂಧ. ಗಂಧವುಳ್ಳದ್ದೆಂದರ್ಥ.

"ತಸ್ಮಾನ್ನ ತಥಾ"= ತಚ್ಛಬ್ದದಿಂದ ಗಂಧಾಭಾವಾಭಾವರೂಪವಾದ ಗಂಧವು ಗೃಹೀತವಾಗುತ್ತದೆ. ಆಗ ತಸ್ಮಾತ್ ಎಂದರೆ ಗಂಧಾಭಾವಾಭಾವವತ್ವಾತ್ ಎಂದರ್ಥವಾಗುತ್ತದೆ. (ಗಂಧವಿರುವುದರಿಂದ ಎಂದು ತಾತ್ಪರ್ಯ) ತಥಾ= ಇತರಭೇದಾಭಾವವುಳ್ಳದ್ದು ನ= ಆಗುವುದಿಲ್ಲ. ಇತರಭೇದಾಭಾವಾಭಾವವತೀ ಇತರಭೇಧಾಭಾವಾಭಾವವುಳ್ಳದ್ದಾಗುತ್ತದೆ ಅಂದರೆ ಇತರಭೇದವುಳ್ಳದ್ದಾಗುತ್ತದೆ. ಹೀಗೆಯೇ ಜೀವಿಸಿರುವ ಶರೀರವು ಆತ್ಮನಿಂದ ಕೂಡಿದೆ. ಪ್ರಾಣವಿರವುದರಿಂದ. ಯಾವುದು ಪ್ರಾಣದಿಂದ ಕೂಡಿರುವುದಿಲ್ಲವೋ ಅದು ಆತ್ಮನಿಂದ ಕೂಡಿರುವುದಿಲ್ಲ. ಹೇಗೆಂದರೆ ವಸ್ತ್ರ ಇತ್ಯಾದಿ ವ್ಯತಿರೇಕಿ ದೃಷ್ಟಾಂತದಿಂದ ವ್ಯತಿರೇಕಿ ಹೇತುವನ್ನು ತಿಳಿಯಬೇಕು.

**ಸಂದಿಗ್ಧಸಾಧ್ಯವಾನ್ ಪಕ್ಷಃ । ಯಥಾ ಧೂಮವತ್ತ್ವೇ ಹೇತೌ ಪರ್ವತಃ ॥**

ಪಕ್ಷ ಲಕ್ಷಣ ಹೇಳುತ್ತಾನೆ. ಸಂದೇಹಕ್ಕೆ ವಿಷಯವಾದ ಸಾಧ್ಯದಿಂದ ಕೂಡಿರುವುದು ಪಕ್ಷ. "ಸಾಧ್ಯಪ್ರಕಾರಕ ಸಂದೇಹವಿಶೇಷ್ಯತ್ವಂ" ಪಕ್ಷ ಲಕ್ಷಣ. ಪರ್ವತದಲ್ಲಿ ಬೆಂಕಿ ಇದೆಯೋ ಇಲ್ಲವೋ, ಪರ್ವತವು ಬೆಂಕಿಯುಳ್ಳದ್ದೋ ಅಲ್ಲವೋ ಎಂಬ ಸಂದೇಹದಲ್ಲಿ ಸಾಧ್ಯವಾದ ಬೆಂಕಿಯು ಪ್ರಕಾರವಾಗಿಯೂ ಪರ್ವತವು ವಿಶೇಷ್ಯವಾಗಿಯೂ ತೋರುತ್ತದೆ. ಧೂಮ ಹೇತುವಾಗಿರುವಾಗ ಪರ್ವತ ಪಕ್ಷವಾಗುತ್ತದೆ. ಇದು ಪ್ರಾಚೀನರಲಕ್ಷಣ. ಅನುಮಿತಿ ಬರಬೇಕಾದರೆ ಮೊದಲು ನಿಯತವಾಗಿ ಸಾಧ್ಯಸಂದೇಹ ಉಂಟಾಗಿರುತ್ತದೆ. ಎಂದು ಅವರು ಹಾಗೆ ಹೇಳಿರುತ್ತಾರೆ. ಆದರೆ ಈ ಲಕ್ಷಣ ಎಲ್ಲಾ ಕಡೆ ಬರುವುದಿಲ್ಲ. ಮನೆಯಲ್ಲಿ ಕುಳಿತಿರುವ ಒಬ್ಬ ಗೃಹಸ್ಥನಿಗೆ "ಆಕಾಶ ಮೋಡವುಳ್ಳದ್ದೋ ಅಲ್ಲವೋ" ಎಂಬ ಆಕಾಶ ವಿಶೇಷ್ಯಕ ಮೇಘಪ್ರಕಾರಕ ಸಂದೇಹ ಮೊದಲು ಇಲ್ಲದಿದ್ದರೂ ಗುಡುಗುಶಬ್ದವನ್ನು ಅಕಸ್ಮಾತ್ತಾಗಿ ಕೇಳಿದಾಗ 'ಆಕಾಶ ಮೋಡವುಳ್ಳದ್ದು' ಎಂಬ ಅನುಮಿತಿ ಬರುತ್ತದೆ. ಆಕಾಶ ಉದ್ದೇಶ್ಯವಾಗಿಯೂ ಮೇಘವು ವಿಧೇಯವಾಗಿಯೂ ಈ ಅನುಮಿತಿ ತೋರುವುದರಿಂದ 'ಗಗನತ್ವಾವಚ್ಛಿನ್ನೋದ್ದೇಶ್ಯತಾ ನಿರೂಪಿತ ಮೇಘತ್ವಾವಚ್ಛಿನ್ನ ವಿಧೇಯತಾ ನಿರೂಪಕ' ಅನುಮಿತಿಯಾಗುತ್ತದೆ. ಸಂದೇಹವಿಲ್ಲದಿದ್ದರೂ ಈ ಅನುಮತಿ

ಬಂದುದರಿಂದ ಸಂಧಿಗ್ದಸಾಧ್ಯವುಳ್ಳದ್ದು ಪಕ್ಷ ಎಂದು ಹೇಳಲಾಗುವುದಿಲ್ಲ. 'ಅನುಮಿತ್ಯುದ್ದೇಶ್ಯತ್ವಂ' ಪಕ್ಷತ್ವಮ್. ಹೀಗೆ ಹೇಳಿದರೆ ಎಲ್ಲಿಯೂ ದೋಷ ಬರುವುದಿಲ್ಲ. 'ಪರ್ವತೋ ವಹ್ನಿಮಾನ್' ಎಂಬ ಅನುಮಿತಿಯಲ್ಲಿ ಉದ್ದೇಶ್ಯವು ಪರ್ವತವಾದುದರಿಂದ ಅನುಮಿತ್ಯುದ್ದೇಶ್ಯತ್ವವು ಅಲ್ಲಿ ಬರುತ್ತದೆ. 'ಗಗನಂ ಮೇಘವತ್' ಎಂಬ ಅನುಮಿತಿಯಲ್ಲಿಯೂ ಅನುಮಿತಿ ಉದ್ದೇಶ್ಯತ್ವವು ಗಗನದಲ್ಲಿ ಬರುತ್ತದೆ.

**ನಿಶ್ಚಿತ ಸಾಧ್ಯವಾನ್ ಸಪಕ್ಷಃ॥ ಯಥಾ ತತ್ರೈವ ಮಹಾನಸಮ್॥**

ಸಪಕ್ಷಲಕ್ಷಣ ಹೇಳುತ್ತಾನೆ. ನಿಶ್ಚಿತವಾದ ಸಾಧ್ಯವುಳ್ಳದ್ದು ಸಪಕ್ಷ. ಧೂಮರೂಪ ಹೇತುವಿರುವಾಗ ಅಡಿಗೆಮನೆ ಸಪಕ್ಷವಾಗುತ್ತದೆ. 'ಮಹಾನಸಂ ವಹ್ನಿಮತ್' ಅಡಿಗೆಮನೆ ಬೆಂಕಿಯುಳ್ಳದ್ದು. ಎಂಬ ನಿಶ್ಚಯದಲ್ಲಿ ಸಾಧ್ಯಪ್ರಕಾರವಾಗಿಯೂ ಅಡಿಗೆಮನೆ ವಿಶೇಷ್ಯವಾಗಿಯೂ ತೋರುತ್ತದೆ. ಆಗ 'ಸಾಧ್ಯಪ್ರಕಾರಕ ನಿಶ್ಚಯ ವಿಶೇಷ್ಯತ್ವಂ ಸಪಕ್ಷತ್ವಂ' ಎಂದು ಪರಿಷ್ಕೃತ ಲಕ್ಷಣವಾಗುತ್ತದೆ. ಸಾಧ್ಯದಲ್ಲಿ ಪ್ರಕಾರತಾ ಇದೆ. ಇದನ್ನು ನಿರೂಪಿಸುವುದು ನಿಶ್ಚಯ. ಪ್ರಕಾರಕ ಅಂದರೆ ಪ್ರಕಾರತಾ ನಿರೂಪಕ ಎಂದರ್ಥ.

**ನಿಶ್ಚಿತಸಾಧ್ಯಾಭಾವವಾನ್ ವಿಪಕ್ಷಃ । ಯಥಾ ತತ್ರೈವ ಹ್ರದಃ॥**

ವಿಪಕ್ಷಲಕ್ಷಣ ಹೇಳುತ್ತಾನೆ. ನಿಶ್ಚಿತವಾದ ಸಾಧ್ಯದ ಅಭಾವವುಳ್ಳದ್ದು ವಿಪಕ್ಷ. ಧೂಮ ಹೇತುವಾಗಿರುವಾಗ ಹ್ರದ= ಕೊಳ ವಿಪಕ್ಷವಾಗುತ್ತದೆ. ಅಲ್ಲಿ ಸಾಧ್ಯವಾದ ಬೆಂಕಿ ಇಲ್ಲವೆಂದು ನಿಶ್ಚಯವಿದೆ. "ಹ್ರದೋ ವಹ್ನ್ಯಭಾವವಾನ್" ಕೊಳ ಬೆಂಕಿಯ ಅಭಾವವುಳ್ಳದ್ದು ಎಂಬ ನಿಶ್ಚಯವಿದೆ. ಈ ನಿಶ್ಚಯದಲ್ಲಿ ಹ್ರದ ವಿಶೇಷ್ಯ. ವಹ್ನ್ಯಭಾವ ಪ್ರಕಾರ (ವಿಶೇಷಣ). ಆದುದರಿಂದ 'ವಹ್ನ್ಯಭಾವಪ್ರಕಾರಕ ನಿಶ್ಚಯವಿಶೇಷ್ಯತ್ವಂ' ವಿಪಕ್ಷತ್ವಂ ಎಂದು ಲಕ್ಷಣ ವಾಗುತ್ತದೆ. ವಹ್ನ್ಯಭಾವವೇ ಪ್ರಕಾರವಾಗಿ ತೋರಿರುವ ನಿಶ್ಚಯದಲ್ಲಿ ವಿಶೇಷ್ಯವಾದದ್ದು ಯಾವುದೋ ಅದು ವಿಪಕ್ಷವೆಂದರ್ಥ.

**ಸವ್ಯಭಿಚಾರ-ವಿರುದ್ಧ-ಸತ್ಪ್ರತಿಪಕ್ಷ-ಅಸಿದ್ಧ-ಬಾಧಿತಾಃ ಪಂಚ ಹೇತ್ವಾಭಾಸಾಃ ॥**

ಸದ್ಧೇತುಲಕ್ಷಣವನ್ನು ಹೇಳಿ ಈಗ ಅಸದ್ಧೇತುಗಳಾದ ಹೇತ್ವಾಭಾಸಗಳನ್ನು ತೋರಿಸುತ್ತಾನೆ. ಪಂಚಮ್ಯಂತ, ತೃತೀಯಾಂತವಾಗಿ ತೋರುವುದರಿಂದ ಹೇತುವಿನಂತೆ ತೋರುತ್ತವೆ. ದುಷ್ಟಹೇತುಗಳನ್ನು ಪ್ರಸಂಗ ಸಂಗತಿಯಿಂದ ಇಲ್ಲಿ ಹೇಳುತ್ತಾನೆ. ಐದು ದುಷ್ಟಹೇತುಗಳು ಐದು ದೋಷಗಳಿಂದ ಕೂಡಿರುತ್ತವೆ. ವ್ಯಭಿಚಾರ, ವಿರೋಧ, ಸತ್ಪ್ರತಿಪಕ್ಷ, ಅಸಿದ್ಧಿ, ಬಾಧಗಳೆಂಬ ಐದು ದೋಷಗಳಿಂದ ಕ್ರಮವಾಗಿ ಕೂಡಿದ್ದರೆ ಸವ್ಯಭಿಚಾರ ಮುಂತಾದ ಐದು ದುಷ್ಟಹೇತುಗಳಾಗುತ್ತವೆ. 'ಅನುಮಿತಿ (ತತ್ಕರಣಅನ್ಯತರ) ಪ್ರತಿಬಂಧಕಯಥಾರ್ಥಜ್ಞಾನವಿಷಯತ್ವಂ' ಹೇತ್ವಾಭಾಸತ್ವಂ ಎಂದು ಸಾಮಾನ್ಯ ಲಕ್ಷಣ. ಅನುಮತಿಗೆ ಅಥವಾ ವ್ಯಾಪ್ತಿಜ್ಞಾನಕ್ಕೆ ಪ್ರತಿಬಂಧಕವಾದ ಯಥಾರ್ಥಜ್ಞಾನದಲ್ಲಿ ವಿಷಯವಾಗಿ ತೋರುವವುಗಳೇ ಹೇತ್ವಾಭಾಸಗಳು. ಕೆಲವು ಅನುಮಿತಿ ಹುಟ್ಟದಂತೆಯೂ ಕೆಲವು ಅನುಮಿತಿಗೆ ಕಾರಣವಾದ ವ್ಯಾಪ್ತಿಜ್ಞಾನ ಪುಟ್ಟದಂತೆಯೂ ಪ್ರತಿಬಂಧ ಮಾಡುತ್ತವೆ. 'ವಹ್ನಿಃ ಅನುಷ್ಣಃ ದ್ರವ್ಯತ್ವಾತ್. ಜಲವತ್' ಬೆಂಕಿ ತಣ್ಣಗಾಗಿದೆ. ದ್ರವ್ಯವಾದುದರಿಂದ. ನೀರಿನಂತೆ ಎಂದು ಅನುಮಾನಮಾಡಿದಾಗ ದ್ರವ್ಯತ್ವ ಹೇತುವು ದುಷ್ಟವಾಗುತ್ತದೆ. ಇಲ್ಲಿ ಸಾಧ್ಯ ಉಷ್ಣತ್ವಾಭಾವ. ಬೆಂಕಿಯಲ್ಲಿ ಉಷ್ಣತ್ವವೇ ಇರುವುದರಿಂದ ಸಾಧ್ಯಾಭಾವವು (ಉಷ್ಣತ್ವವು) ಪ್ರತ್ಯಕ್ಷಪ್ರಮಾಣದಿಂದ ಪಕ್ಷವಾದ ಬೆಂಕಿಯಲ್ಲಿ ನಿಶ್ಚಿತವಾದುದರಿಂದ ಸಾಧ್ಯದಬಾಧ ನಿಶ್ಚಯದಿಂದ ಸಾಧ್ಯದ ಅನುಮಿತಿ ಬರುವುದಿಲ್ಲ. ಉಷ್ಣತ್ವವುಳ್ಳ ಬೆಂಕಿಯಲ್ಲಿ ಅನುಷ್ಣತ್ವಸಾಧಕವಾದ ದ್ರವ್ಯತ್ವಹೇತುವುದುಷ್ಟವಾಗುತ್ತದೆ. ಇದನ್ನೇ 'ಯದ್ವಿಷಯಕತ್ವೇನ ಜ್ಞಾನಸ್ಯ ಅನುಮಿತಿ ತತ್ಕರಣಾನ್ಯತರಪ್ರತಿಬಂಧಕತ್ವಂ ತತ್ವಂ' ದೋಷಸಾಮಾನ್ಯಲಕ್ಷಣಂ ಎನ್ನುತ್ತಾರೆ. ಇಲ್ಲಿ ಜ್ಞಾನವೆಂದರೆ ನಿಶ್ಚಿತವಾದ ಯಥಾರ್ಥ ಜ್ಞಾನವೆಂದರ್ಥ. ಆಹಾರ್ಯವಾಗಿರಬಾರದು. (ಬಾಧವಿದ್ದರೂ ಇಚ್ಛೆಯಿಂದಬಂದ ಜ್ಞಾನ ಆಹಾರ್ಯ.) ಅಪ್ರಾಮಾಣ್ಯಬುದ್ಧಿ ಇರಬಾರದು. ಇದನ್ನೇ ಅನಾಹಾರ್ಯ, ಅಪ್ರಾಮಾಣ್ಯಜ್ಞಾನ ಅನಾಸ್ಕಂದಿತ ನಿಶ್ಚಯವೆನ್ನುತ್ತಾರೆ. ಜ್ಞಾನಸ್ಯ ಎಂಬಲ್ಲಿ ಷಷ್ಠಿಗೆ ವೃತ್ತಿತ್ವ ಅರ್ಥ. ವೃತ್ತಿತ್ವಕ್ಕೆ ಯದ್ವಿಷಯಕತ್ವದಲ್ಲಿ ಅನ್ವಯ. ಜ್ಞಾನವು ಯಾವ ರೂಪದಿಂದ ಪ್ರತಿಬಂಧಕವಾಗುತ್ತದೆಯೋ ಆ ರೂಪವೆಂದರ್ಥ. ಯದ್ವಿಷಯಕತ್ವೇನ ಎಂಬಲ್ಲಿ ತೃತೀಯಾ

ವಿಭಕ್ತಿಗೆ ಅವಚ್ಛಿನ್ನತ್ವವು ಅರ್ಥ. ಅದಕ್ಕೆ ಪ್ರತಿಬಂಧಕತ್ವದಲ್ಲಿ ಅನ್ವಯ. ಆಗ 'ಅನಾಹಾರ್ಯಾಪ್ರಾಮಾಣ್ಯಜ್ಞಾನಾನಾಸ್ಕಂದಿತ ನಿಶ್ಚಯ ವೃತ್ತಿಯ ದ್ವಿಷಯಕತ್ವಾವಚ್ಛಿನ್ನಂ, ಪ್ರಕೃತಾನುಮಿತಿ ತತ್ಕರಣಾನ್ಯತರ ಪ್ರತಿಬಂಧ ಕತ್ವಂ ತತ್ವಂ' ಎಂದು ಪರಿಷ್ಕೃತವಾಗುತ್ತದೆ. ದೋಷವಿಷಯಕ ಜ್ಞಾನವು ಪ್ರತಿಬಂಧಕವಾಗುತ್ತದೆ. ದೋಷವಿಷಯಕತ್ವವು ಪ್ರತಿಬಂಧಕತಾವಚ್ಛೇದಕ ಕವಾಗುತ್ತದೆ. ಪ್ರತಿಬಂಧಕತಾ ಪ್ರತಿಬಂಧಕದಲ್ಲಿದೆ. ಅದು ದೋಷವಿಷಯ ಕತ್ವಾವಚ್ಛಿನ್ನವಾಗುತ್ತದೆ. ಯತ್‌ಪದದಿಂದ ದೋಷವನ್ನು ತೆಗೆದುಕೊಂಡದ್ದ ರಿಂದ ತತ್ವಂ ಎಂಬುದು ದೋಷದಲ್ಲಿ ಬರುತ್ತದೆ. ಹೇತುವಿನಲ್ಲಿ ದೋಷಜ್ಞಾನ ಬಂದರೆ ಆಗ ಅನುಮಿತಿಪ್ರತಿಬಂಧವಾಗಲೀ ವ್ಯಾಪ್ತಿಜ್ಞಾನಪ್ರತಿಬಂಧ ವಾಗಲೀ ಉಂಟಾಗುತ್ತದೆ. ವಾದಿನಿಗ್ರಹಕ್ಕೋಸ್ಕರ ದುಷ್ಟಹೇತುವು ನಿರೂಪಿತ ವಾಗಿದೆ. ವಾದಿಯು ಪ್ರಯೋಗಿಸಿರುವ ಹೇತುವಿನಲ್ಲಿ ದೋಷೋದ್ಭಾವನ ಮಾಡಿದರೆ ಆಗ ಆತನು ನಿಗ್ರಹಿಸಲ್ಪಟ್ಟಂತಾಗುತ್ತಾನೆ. 'ಪರ್ವತೋ ವಹ್ನಿ ಮಾನ್ ಪ್ರಮೇಯತ್ವಾತ್' ಎಂದು ಹೇಳಿದರೆ ಪ್ರಮೇಯತ್ವ ಹೇತುವು ದುಷ್ಟ ವಾಗುವುದರಿಂದ ಹೇತ್ವಾಭಾಸವಾಗುತ್ತದೆ. ಪ್ರಮೇಯತ್ವ ಇದ್ದಲ್ಲಿ ಎಲ್ಲಾ ಕಡೆಯಲ್ಲಿ ವಹ್ನಿ ಇದ್ದರೆ ಆಗ ಸದ್ಧೇತುವಾಗುತ್ತಿತ್ತು. ಆದರೆ ಪ್ರಮೇ ಯತ್ವವು ವಹ್ನಿ ಇಲ್ಲದಿರುವ ಜಲಾದಿಗಳಲ್ಲಿಯೂ ಇರುವುದರಿಂದ ವಹ್ನಿವ್ಯಾಪ್ಯ ವಾಗುವುದಿಲ್ಲ. ವಹ್ನ್ಯಭಾವವದ್ವೃತ್ತಿತ್ವರೂಪ (ವಹ್ನಿ ಇಲ್ಲದಿರುವಲ್ಲಿ ಇರು ವುದು) ವ್ಯಭಿಚಾರದೋಷವು ಪ್ರಮೇಯತ್ವದಲ್ಲಿ ತೋರುವುದರಿಂದ ವಹ್ನ್ಯ ಭಾವವದವೃತ್ತಿತ್ವರೂಪ ವ್ಯಾಪ್ತಿಜ್ಞಾನಪ್ರತಿಬಂಧವುಂಟಾಗುತ್ತದೆ. ಸಾಧ್ಯಾ ಭಾವವದವೃತ್ತಿತ್ವಂ (ಸಾಧ್ಯವಿಲ್ಲದಿರುವಲ್ಲಿ ಇಲ್ಲದಿರುವುದು) ವ್ಯಾಪ್ತಿಯೆಂದು ಹಿಂದೆ ಹೇಳಿದೆ. ವ್ಯಾಪ್ತಿ ಇಲ್ಲದಿದ್ದರೆ ಅನುಮಿತಿಯೂ ಬರುವುದಿಲ್ಲ. ಹೀಗೆ ಇತರದೋಷಜ್ಞಾನ ಬಂದಾಗ ಅನುಮತಿಯಾಗಲೀ ವ್ಯಾಪ್ತಿಜ್ಞಾನವಾಗಲೀ ಹುಟ್ಟುವುದಿಲ್ಲ.

**ಸವ್ಯಭಿಚಾರೋಽನೈಕಾಂತಿಕಃ। ಸ ತ್ರಿವಿಧಃ -ಸಾಧಾರಣಾಽ ಸಾಧಾರಣಾಽನುಪಸಂಹಾರಿಭೇದಾತ್। ತತ್ರ ಸಾಧ್ಯಾಭಾವವದ್ವೃತ್ತಿಃ ಸಾಧಾರಣೋಽನೈಕಾಂತಿಕಃ । ಯಥಾ-ಪರ್ವತೋ ವಹ್ನಿಮಾನ್.**

**ಪ್ರಮೇಯತ್ವಾತ್ ಇತಿ। ಪ್ರಮೇಯತ್ವಸ್ಯ ವಹ್ನ್ಯಭಾವವತಿ ಹ್ರದೇ ವಿದ್ಯಮಾನತ್ವಾತ್॥**

ವ್ಯಭಿಚಾರದೋಷದಿಂದ ಕೂಡಿದ ಸವ್ಯಭಿಚಾರಕ್ಕೆ ಅನೈಕಾಂತಿಕ ಎಂದೂ ಹೆಸರಿದೆ. ಸಾಧಾರಣ ಅಸಾಧಾರಣ, ಅನುಪಸಂಹಾರಿ ಎಂದು ಸವ್ಯಭಿಚಾರ (ಹೇತ್ವಾಭಾಸ) ಮೂರು ವಿಧವಾಗಿವೆ. ಈ ಮೂರರಲ್ಲಿ ಸಾಧಾರಣ ರೂಪ ಅನೈಕಾಂತಿಕದಲಕ್ಷಣವು 'ಸಾಧ್ಯಾಭಾವವದ್ವೃತ್ತಿತ್ವಂ' ಎಂದಾಗುತ್ತದೆ. ಸಾಧ್ಯ ಇಲ್ಲದಿರುವಲ್ಲಿ ಇರುವುದು. ಸಾಧಾರಣ ಹೇತುವು ಸಾಧ್ಯಾಭಾವವಿದ್ದಲ್ಲಿ ಇರುತ್ತದೆ. ಸಾಧ್ಯವಿಲ್ಲದಿರುವಲ್ಲಿ ಇಲ್ಲದಿದ್ದರೇ ಅದು ಸದ್ಧೇತುವಾಗುತ್ತದೆ. 'ಪರ್ವತ ಬೆಂಕಿಯಿಂದಕೂಡಿವೆ, ಪ್ರ ಮೇ ೯ ಯ ತ್ವ ದಿಂ ದ' ಎಂದರೆ ಪ್ರಮೇಯತ್ವಹೇತುವು ಸಾಧಾರಣವಾಗುತ್ತದೆ. ಸಾಧ್ಯವಾದ ಬೆಂಕಿ ಇಲ್ಲದೇ ಇರುವ ಕೊಳ ಮುಂತಾದುವುಗಳಲ್ಲಿಯೂ ಪ್ರಮೇಯತ್ವ ಇದೆ. ಪ್ರಮೇಯತ್ವ ಇಲ್ಲದಿರುವ ಸ್ಥಳವೇ ಇಲ್ಲ. ಎಲ್ಲೆಲ್ಲಿ ಪ್ರಮೇಯತ್ವವೋ ಅಲ್ಲಲ್ಲಿ ಬೆಂಕಿ ಇವೆ ಎಂಬ ವ್ಯಾಪ್ತಿಜ್ಞಾನ ಬಾರದಿರುವುದರಿಂದ ಸಾಧ್ಯಾಭಾವವದ್ವೃತ್ತಿತ್ವರೂಪ ದೋಷಜ್ಞಾನದಿಂದ ವ್ಯಾಪ್ತಿಜ್ಞಾನ ಪ್ರತಿಬಂಧವುಂಟಾಗುತ್ತದೆ.

**ಸರ್ವಸಪಕ್ಷ(ವಿಪಕ್ಷ)ವ್ಯಾವೃತ್ತಃ ಪಕ್ಷಮಾತ್ರವೃತ್ತಿರಸಾಧಾರಣಃ ॥ ಯಥಾ ಶಬ್ದೋ ನಿತ್ಯಃ ಶಬ್ದತ್ವಾತ್, ಇತಿ। ಶಬ್ದತ್ವಂ ಸರ್ವೇಭ್ಯೋ ನಿತ್ಯೇಭ್ಯಃ ಅನಿತ್ಯೇಭ್ಯಶ್ಚ ವ್ಯಾವೃತ್ತಂ ಶಬ್ದಮಾತ್ರ ವೃತ್ತಿ ॥**

ನಿಶ್ಚಿತವಾದ ಸಾಧ್ಯವುಳ್ಳದ್ದು ಸಪಕ್ಷ ಎಂದು ಹಿಂದೆ ಹೇಳಿದೆ. ಎಲ್ಲಾ ಸಪಕ್ಷಗಳಿಂದಲೂ ವಿಪಕ್ಷಗಳಿಂದಲೂ ವ್ಯಾವೃತ್ತವಾಗಿ ಅಂದರೆ ಅವುಗಳಲ್ಲಿ ಇರದೆ ಪಕ್ಷದಲ್ಲಿ ಮಾತ್ರವಿದ್ದರೆ ಅದು ಅಸಾಧಾರಣವಾಗುತ್ತದೆ. 'ನಿಶ್ಚಿತ ಸಾಧ್ಯವದವೃತ್ತಿತ್ವಂ' ಲಕ್ಷಣ. ಸಾಧ್ಯವದವೃತ್ತಿತ್ವಂ ಎಂದರೆ 'ಸಾಧ್ಯಾಸಾಮಾನಾಧಿಕರಣ್ಯಂ' ಎಂದಾಗುತ್ತದೆ. ಸಾಧ್ಯದ ಅಧಿಕರಣದಲ್ಲಿ ಇಲ್ಲದಿರುವಿಕೆ. ಹೇತುವಿನಲ್ಲಿ ಸಾಧ್ಯಾಸಾಮಾನಾಧಿಕರಣ್ಯವು ನಿಶ್ಚಿತವಾದರೆ ಸಾಧ್ಯಸಾಮಾನ್ಯಾಧಿಕರಣ್ಯರೂಪ ವ್ಯಾಪ್ತಿಜ್ಞಾನವು ಹುಟ್ಟುವುದಿಲ್ಲ. 'ಶಬ್ದವು ನಿತ್ಯ ಶಬ್ದತ್ವದಿಂದ' ಎಂಬ ಅನುಮಾನಪ್ರಯೋಗದಲ್ಲಿ ಶಬ್ದತ್ವಹೇತು ಅಸಾ

ಧಾರಣವಾಗುತ್ತದೆ. ಇಲ್ಲಿ ಸಾಧ್ಯ ನಿತ್ಯತ್ವ. ನಿಶ್ಚಿತಸಾಧ್ಯವುಳ್ಳದ್ದು ಆಕಾಶಾದಿ ನಿತ್ಯಪದಾರ್ಥ. ಸಾಧ್ಯಾಭಾವವುಳ್ಳವುಗಳು ಘಟಾದಿ ಅನಿತ್ಯಪದಾರ್ಥಗಳು. ಶಬ್ದತ್ವವು ಈ ಎರಡರಲ್ಲಿಯೂ ಇಲ್ಲ. ಅವುಗಳಿಂದ ವ್ಯಾವೃತ್ತವಾಗಿದೆ. ಅದು ಕೇವಲ ಪಕ್ಷವಾದ ಶಬ್ದದಲ್ಲಿ ಮಾತ್ರ ಇರುತ್ತದೆ. ಸಾಧ್ಯವಾದ ನಿತ್ಯತ್ವದ ಅಧಿಕರಣದಲ್ಲಿ (ಆಕಾಶಾದಿಯಲ್ಲಿ) ಇಲ್ಲದಿರುವುದರಿಂದ ನಿತ್ಯತ್ವಸಾಮಾನಾಧಿಕರಣ್ಯರೂಪ ವ್ಯಾಪ್ತಿಜ್ಞಾನ ಬರುವುದಿಲ್ಲ. ಆದುದರಿಂದ ಅನುಮಿತಿ ಕರಣಪ್ರತಿಬಂಧಕತ್ವ ಬರುತ್ತದೆ.

**ಅನ್ವಯವ್ಯತಿರೇಕದೃಷ್ಟಾಂತರಹಿತೋಽನುಪಸಂಹಾರೀ । ಯಥಾ ಸರ್ವಮನಿತ್ಯಂ ಪ್ರಮೇಯತ್ವಾತ್–ಇತಿ । ಅತ್ರ ಸರ್ವಸ್ಯಾಪಿ ಪಕ್ಷತ್ವಾದ್ದೃಷ್ಟಾಂತೋ ನಾಸ್ತಿ ॥**

ಅನ್ವಯದೃಷ್ಟಾಂತ ವ್ಯತಿರೇಕದೃಷ್ಟಾಂತವಿಲ್ಲದಿರುವುದು ಅನುಪಸಂಹಾರೀ. ಎರಡು ದೃಷ್ಟಾಂತಗಳೂ ಇಲ್ಲದಿರುವುದರಿಂದ ಅನ್ವಯವ್ಯಾಪ್ತಿಯಾಗಲೀ, ವ್ಯತಿರೇಕವ್ಯಾಪ್ತಿಯಾಗಲೀ ಸಾಮಗ್ರಿ ಇಲ್ಲದಿರುವುದರಿಂದ ಬರುವುದಿಲ್ಲ. 'ಎಲ್ಲವೂ ಅನಿತ್ಯ. ಪ್ರಮೇಯತ್ವದಿಂದ. ಇಲ್ಲಿ ಎಲ್ಲವೂ ಪಕ್ಷವಾಗಿವೆ. ಪಕ್ಷಕ್ಕಿಂತ ಬೇರೆಯಾದವುಗಳನ್ನು ದೃಷ್ಟಾಂತವಾಗಿ ಹೇಳಬೇಕು. ಬೇರೆ ಇಲ್ಲವೇ ಇಲ್ಲ. ಹೇತುಸಾಧ್ಯಗಳಿಗೆ ನಿಶ್ಚಿತವಾದ ಪ್ರದೇಶ ಸಿಗದಿರುವುದರಿಂದ ಸಪಕ್ಷರೂಪದೃಷ್ಟಾಂತವಿಲ್ಲ. ಆದುದರಿಂದ ಅದನ್ನನುಸರಿಸಿ ಬರುವ ವ್ಯಾಪ್ತಿಜ್ಞಾನವೂ ಬರುವುದಿಲ್ಲ.

**ಸಾಧ್ಯಾಭಾವವ್ಯಾಪ್ತೋ ಹೇತುರ್ವಿರುದ್ಧಃ । ಯಥಾ ಶಬ್ದೋ ನಿತ್ಯಃ ಕೃತಕತ್ವಾತ್ ಇತಿ । ಕೃತಕತ್ವಂ ಹಿ ನಿತ್ಯತ್ವಾಭಾವೇನಾನಿತ್ಯತ್ವೇನ ವ್ಯಾಪ್ತಮ್ ॥**

ಸಾಧ್ಯಾಭಾವದ ವ್ಯಾಪ್ತಿಯಿಂದ ಕೂಡಿರುವ ಹೇತುವು ವಿರುದ್ಧವಾಗುತ್ತದೆ. ಸಾಧ್ಯಾಭಾವದಿಂದ ನಿರೂಪಿತವಾದ (ನಿರೂಪಿಸಲ್ಪಟ್ಟ) ವ್ಯತಿರೇಕ ವ್ಯಾಪ್ತಿಯನ್ನು ತೆಗೆದುಕೊಳ್ಳಬೇಕು. "ಸಾಧ್ಯವ್ಯಾಪಕೀಭೂತಾಭಾವಪ್ರತಿಯೋಗಿತ್ವಂ" ಅದರ ಸ್ವರೂಪ. ಸಾಧ್ಯ ನಿತ್ಯತ್ವ. ಅದಕ್ಕೆ ವ್ಯಾಪಕವಾದ ಅಭಾವ = ನಿತ್ಯತ್ವ ಇದ್ದಲ್ಲಿ ಇರುವ ಅಭಾವ ಕೃತಕತ್ವಾಭಾವ. ಅದರ

ಪ್ರತಿಯೋಗಿ ಕೃತಕತ್ವ. ನಿತ್ಯ ಕೃತಕವಲ್ಲ. ನಿತ್ಯತ್ವ ಇದ್ದಲ್ಲಿ ಕೃತಕತ್ವ ಇಲ್ಲ. ಸಾಧ್ಯವ್ಯಾಪ್ಯವು ಹೇತುವಾಗಬೇಕು. ಇಲ್ಲಿ ಸಾಧ್ಯಾಭಾವವ್ಯಾಪ್ಯವಾಗಿದೆ. ಸಾಧ್ಯಾಭಾವವ್ಯಾಪ್ಯವಾದ ಹೇತುವು ಪಕ್ಷದಲ್ಲಿ ತೋರಿದೆ. ಆಗ ಪಕ್ಷವಿಶೇಷ್ಯಕ ಸಾಧ್ಯಾಭಾವವ್ಯಾಪ್ಯಹೇತುಪ್ರಕಾರಕಜ್ಞಾನದಿಂದ ಪಕ್ಷವಿಶೇಷ್ಯಕ ಸಾಧ್ಯ ಪ್ರಕಾರಕಜ್ಞಾನವು ಬರುವುದಿಲ್ಲ. ನಿತ್ಯತ್ವಾಭಾವದಿಂದ ವ್ಯಾಪ್ಯವಾದ ಕೃತ ಕತ್ವ ಹೇತುವು ಶಬ್ದದಲ್ಲಿ ಇದ್ದರೆ ಶಬ್ದವು ನಿತ್ಯ ಎಂಬ ಅನುಮಿತಿ ಹುಟ್ಟುವು ದಿಲ್ಲ. ಹೀಗೆಯೇ ಸತ್ಪ್ರತಿಪಕ್ಷದಲ್ಲಿಯೂ ಬರುವುದರಿಂದ ಅಲ್ಲಿಯೂ ಅನು ಮಿತಿಪ್ರತಿಬಂಧವೇ ಫಲವಾಗುತ್ತದೆ. ವಿರುದ್ಧದಲ್ಲಿ ಹೇತು ಒಂದೇ ಇರು ತ್ತದೆ. ಸತ್ಪ್ರತಿಪಕ್ಷದಲ್ಲಿ ಎರಡು ಹೇತುಗಳಿರುತ್ತವೆ. ಇದೇ ಪರಸ್ಪರ ವ್ಯತ್ಯಾಸ. ಸಾಧ್ಯದ ಅಭಾವವನ್ನು ಸಾಧಿಸುವ ಹೇತುವೇ ಸಾಧ್ಯವನ್ನು ಸಾಧಿಸಲು ಹೇಳಿರುವುದರಿಂದ ಇದು ದೋಷವಾಗುತ್ತದೆ.

**ಸಾಧ್ಯಾಭಾವಸಾಧಕಂ ಹೇತ್ವಂತರಂ ಯಸ್ಯ ಸ ಸತ್ಪ್ರತಿಪಕ್ಷಃ। ಯಥಾ ಶಬ್ದೋ ನಿತ್ಯಃ ಶ್ರಾವಣತ್ವಾತ್ ಶಬ್ದತ್ವವತ್। ಶಬ್ದೋಽನಿತ್ಯಃ ಕಾರ್ಯತ್ವಾತ್ ಘಟವತ್॥**

ಯಾವ ಹೇತುವಿಗೆ ಸಾಧ್ಯಾಭಾವವನ್ನು ಸಾಧಿಸುವ ಹೇತ್ವಂತರವು ಅಂದರೆ ಪ್ರತಿಪಕ್ಷವಾಗಿರುವ ಹೇತು ಇದೆಯೋ ಅದು ಸತ್ಪ್ರತಿಪಕ್ಷ. ಶ್ರಾವ ಣತ್ವ ಹೇತುವಿನಿಂದ ಶಬ್ದದಲ್ಲಿ ನಿತ್ಯತ್ವವನ್ನು ಸಾಧಿಸಲು ಹೊರಟರೆ ಆಗ ಅಲ್ಲಿಯೇ ನಿತ್ಯತ್ವಾಭಾವ (ಅನಿತ್ಯತ್ವ) ರೂಪ ಸಾಧ್ಯಾಭಾವವನ್ನು ಸಾಧಿಸುವ ಕಾರ್ಯತ್ವರೂಪ ಪ್ರತಿಪಕ್ಷಹೇತು ಬರುತ್ತದೆ. ಆದುದರಿಂದ ಶ್ರಾವಣತ್ವ ಸತ್ಪ್ರತಿಪಕ್ಷವಾಗುತ್ತದೆ. ಶಬ್ದದಲ್ಲಿ ಸಾಧ್ಯಾಭಾವವ್ಯಾಪ್ಯವಾದ ಇನ್ನೊಂದು ಹೇತುವಿರುವುದರಿಂದ 'ಶಬ್ದಃ ನಿತ್ಯಃ' ಎಂಬ ಅನುಮಿತಿ ಬರುವುದಿಲ್ಲ. ಸತ್ಪ್ರತಿಪಕ್ಷಕ್ಕೆ 'ಪ್ರಕರಣಸಮ' ಎಂಬ ಬೇರೆ ಹೆಸರೂ ಇದೆ

**ಅಸಿದ್ಧಸ್ತ್ರಿವಿಧಃ– ಆಶ್ರಯಾಸಿದ್ಧಃ, ಸ್ವರೂಪಾಸಿದ್ಧೋ ವ್ಯಾಪ್ಯ ತ್ವಾಸಿದ್ಧಶ್ಚೇತಿ ॥ ಆಶ್ರಯಾಸಿದ್ಧೋ ಯಥಾ–ಗಗನಾರವಿಂದಂ ಸುರಭಿ ಅರವಿಂದತ್ವಾತ್, ಸರೋಜಾರವಿಂದವತ್। ಅತ್ರ ಗಗನಾರ ವಿಂದಮಾಶ್ರಯಃ ಸಚ ನಾಸ್ತ್ಯೇವ॥**

ಆಶ್ರಯಾಸಿದ್ಧ, ಸ್ವರೂಪಾಸಿದ್ಧ, ವ್ಯಾಪ್ಯತ್ವಾಸಿದ್ಧವೆಂದು ಅಸಿದ್ಧವು ಮೂರು ವಿಧವಾಗಿದೆ. ಆಶ್ರಯಾಸಿದ್ಧಕ್ಕೆ ಉದಾಹರಣೆ ಆಕಾಶದ ಕಮಲವು ಪರಿಮಳ ಭರಿತವಾಗಿದೆ, ಕಮಲತ್ವವಿರುವುದರಿಂದ. ಕೊಳದಲ್ಲಿರುವ ಕಮಲ ದಂತೆ. ಇಲ್ಲಿ ಅರವಿಂದತ್ವಕ್ಕೆ ಆಕಾಶದ ಅರವಿಂದ ಆಶ್ರಯ. ಆಕಾಶದಲ್ಲಿ ಕಮಲವಿಲ್ಲವೇ ಇಲ್ಲ. ಪಕ್ಷತಾವಚ್ಛೇದಕವಿಶಿಷ್ಟಪಕ್ಷದ ಅಪ್ರಸಿದ್ಧಿಯೇ ಆಶ್ರಯಾಸಿದ್ಧಿ. ಪಕ್ಷದಲ್ಲಿ ಪಕ್ಷತಾವಚ್ಛೇಕವು ಬಾರದಿದ್ದರೆ ಪಕ್ಷತಾವಚ್ಛೇದಕ ವಿಶಿಷ್ಟಪಕ್ಷವು ಅಪ್ರಸಿದ್ಧವಾಗುತ್ತದೆ. ಗಗನಾರವಿಂದವುಪಕ್ಷ. ಇದರಲ್ಲಿ ಗಗನೀಯತ್ವ (ಗಗನಸಂಬಂಧ) ಅವಚ್ಛೇದಕ. ಗಗನೀಯತ್ವರೂಪ ಪಕ್ಷತಾವಚ್ಛೇದಕ ಅರವಿಂದದಲ್ಲಿ ಇಲ್ಲದಿರುವುದರಿಂದ ಪಕ್ಷವು ಅಪ್ರಸಿದ್ಧವಾಗುತ್ತದೆ. ಅರವಿಂದದಲ್ಲಿ ಗಗನೀಯತ್ವ ಇಲ್ಲದಮೇಲೆ ಗಗನೀಯತ್ವ ವಿಶಿಷ್ಟ ಅರವಿಂದದಲ್ಲಿ ಗಗನಾರವಿಂದದಲ್ಲಿ ಸೌರಭ್ಯಾನುಮಿತಿ ಬರುವುದಿಲ್ಲ. ಅನುಮಿತಿ ಪ್ರತಿಬಂಧವೇ ಇದಕ್ಕೆ ಫಲ.

**ಸ್ವರೂಪಾಸಿದ್ಧೋ ಯಥಾ| ಶಬ್ದೋ ಗುಣಃ ಚಾಕ್ಷುಷತ್ವಾತ್, ರೂಪವತ್| ಅತ್ರ ಚಾಕ್ಷುಷತ್ವಂ ಶಬ್ದೇ ನಾಸ್ತಿ, ಶಬ್ದಸ್ಯ ಶ್ರಾವಣತ್ವಾತ್||**

ಪಕ್ಷದಲ್ಲಿ ಹೇತುವಿಲ್ಲದಿರುವುದೇ ಸ್ವರೂಪಾಸಿದ್ಧಿರೂಪ ಅಸಿದ್ಧಿ. ಪಕ್ಷದಲ್ಲಿ ಹೇತುಬಾರದಿದ್ದರೆ ಹೇತ್ವಭಾವ ವಿಶಿಷ್ಟಪಕ್ಷಜ್ಞಾನ ಬಂದರೆ ಪಕ್ಷ ವಿಶೇಷ್ಯಕ ಹೇತುಪ್ರಕಾರಕ ಪರಾಮರ್ಶ ಹುಟ್ಟುವುದಿಲ್ಲ. 'ಸಾಧ್ಯವ್ಯಾಪ್ಯಹೇತುಮಾನ್ ಪಕ್ಷಃ' ಎಂಬ ಪರಾಮರ್ಶಕ್ಕೆ ಪ್ರತಿಬಂಧಕವಾಗುತ್ತದೆ. ಪರಾಮರ್ಶ ಬಾರದಿದ್ದರೆ ಅನುಮಿತಿಯೂ ಹುಟ್ಟುವುದಿಲ್ಲ. ಉದಾಃ – ಶಬ್ದವು ಗುಣವಾಗಿದೆ. ಕಣ್ಣಿನ ಪ್ರತ್ಯಕ್ಷಕ್ಕೆ ವಿಷಯವಾದುದರಿಂದ. ರೂಪದಂತೆ. ರೂಪವು ಚಾಕ್ಷುಷ ಪ್ರತ್ಯಕ್ಷಕ್ಕೆ ವಿಷಯವಾದಂತೆ ಶಬ್ದವೂ ವಿಷಯವಾದುದರಿಂದ ಗುಣವೆಂದು ಒಬ್ಬನು ಸಾಧಿಸುತ್ತಾನೆ. ಇದು ಅಸಿದ್ಧ. ಶಬ್ದದಲ್ಲಿ ಚಾಕ್ಷುಷಪ್ರತ್ಯಕ್ಷ ವಿಷಯತ್ವವೇ (ಹೇತು) ಬರುವುದಿಲ್ಲ. ನಯನಪ್ರತ್ಯಕ್ಷಕ್ಕೆ ಇದು ಎಂದೂ ವಿಷಯವಲ್ಲ. ಇದರಿಂದ ಪಕ್ಷಧರ್ಮತಾಜ್ಞಾನ ಹುಟ್ಟುವುದಿಲ್ಲ. ಇದು ನಾಲ್ಕು ವಿಧವಾಗಿದೆ. ಶುದ್ಧಾಸಿದ್ಧ. 1) ಸಂಪೂರ್ಣ ಪಕ್ಷದಲ್ಲಿಹೇತು ಬಾರದಿರುವುದು.

2) ಭಾಗಾಸಿದ್ಧ. ಪಕ್ಷದ ಏಕದೇಶದಲ್ಲಿ ಹೇತುಬಾರದಿರುವುದು. ಉದಾ:– ರೂಪಾದಿಚತುಷ್ಟಯಂ ಗುಣಃ ರೂಪತ್ವಾತ್. ಎಂದರೆ ರೂಪತ್ವಹೇತುವು ರೂಪಾದಿ ನಾಲ್ಕರಿಂದಕೂಡಿದ ಪಕ್ಷದ ಏಕದೇಶವಾದ ರಸ,ಗಂಧ, ಸ್ಪರ್ಶಗಳಲ್ಲಿ ಬರುವುದಿಲ್ಲ. 3) ವಿಶೇಷಣಾಸಿದ್ಧಿ. ಹೇತುವಿನ ವಿಶೇಷಣ ಪಕ್ಷದಲ್ಲಿ ಬಾರದಿರುವುದು. ಉದಾ:– 'ಗಾಳಿ ಪ್ರತ್ಯಕ್ಷವಾಗಿದೆ. ರೂಪದಿಂದಕೂಡಿದ್ದು ಸ್ಪರ್ಶದಿಂದ ಕೂಡಿರುವುದರಿಂದ.' ಇಲ್ಲಿ ರೂಪದಿಂದಕೂಡಿದ್ದಾಗಿ ಎಂಬ ವಿಶೇಷಣಾಂಶ ಗಾಳಿರೂಪದಲ್ಲಿ ಅಪ್ರಸಿದ್ಧ. 'ವಿಶೇಷಣಾಭಾವಾತ್ ವಿಶಿಷ್ಟಾಭಾವಃ' ವಿಶೇಷಣವಿಲ್ಲದಿದ್ದರೆ ವಿಶೇಷಣದಿಂದಕೂಡಿದ ವಿಶೇಷ್ಯವೂ ಇಲ್ಲವೆಂದು ಸಿದ್ಧಾಂತ. ಆಗ ರೂಪವತ್ತ್ವ ವಿಶಿಷ್ಟಸ್ಪರ್ಶವತ್ತ್ವಹೇತುವು ವಾಯುವಿನಲ್ಲಿ ಬರು ವುದಿಲ್ಲ. 4) ವಿಶೇಷ್ಯಾಸಿದ್ಧಿ. ವಿಶೇಷಣವಿದ್ದರೂ ವಿಶೇಷ್ಯ ಪಕ್ಷದಲ್ಲಿ ಬಾರದಿರುವುದು. ಉದಾ:– ವಾಯು ಪ್ರತ್ಯಕ್ಷವಾಗಿದೆ. ಸ್ಪರ್ಶವತ್ತ್ವ ವಿಶಿಷ್ಟರೂಪವತ್ತ್ವವಿರುವುದರಿಂದ. ಇಲ್ಲಿ ಸ್ಪರ್ಶರೂಪವಿಶೇಷಣವಿದ್ದರೂ ರೂಪರೂಪ ವಿಶೇಷ್ಯ ವಾಯುವಿನಲ್ಲಿ ಬರುವುದಿಲ್ಲ. ವಿಶೇಷ್ಯವಿಲ್ಲದಿದ್ದರೆ ವಿಶಿಷ್ಟವೂ ಇರುವುದಿಲ್ಲ.

**ಸೋಪಾಧಿಕೋ ಹೇತುರ್ವ್ಯಾಪ್ಯತ್ವಾಸಿದ್ಧಃ। ಸಾಧ್ಯವ್ಯಾಪಕತ್ವೇ ಸತಿ ಸಾಧನಾವ್ಯಾಪಕತ್ವಮುಪಾಧಿಃ। ಸಾಧ್ಯಸಮಾನಾಧಿಕರಣಾತ್ಯಂತಾಭಾವಾಪ್ರತಿಯೋಗಿತ್ವಂ ಸಾಧ್ಯವ್ಯಾಪಕತ್ವಮ್ । ಸಾಧನವನ್ನಿಷ್ಠಾತ್ಯಂತಾಭಾವಪ್ರತಿಯೋಗಿಕತ್ವಂ ಸಾಧನಾವ್ಯಾಪಕತ್ವಮ್। ಪರ್ವತೋ ಧೂಮವಾನ್ ವಹ್ನಿಮತ್ತ್ವಾತ್ ಇತ್ಯತ್ರಆರ್ದ್ರೇಂಧನಸಂಯೋಗ ಉಪಾಧಿಃ । ಯತ್ರ ಧೂಮಸ್ತತ್ರಾರ್ದ್ರೇಂಧನಸಂಯೋಗ ಇತಿ ಸಾಧ್ಯವ್ಯಾಪಕತಾ । ಯತ್ರ ವಹ್ನಿಸ್ತತ್ರಾರ್ದ್ರೇಂಧನಸಂಯೋಗೋ ನಾಸ್ತಿ. ಅಯೋಗೋಲಕೇ ಆರ್ದ್ರೇಂಧನಸಯೋಗಾಭಾವಾದಿತಿ ಸಾಧನಾವ್ಯಾಪಕತಾ। ಏವಂ ಸಾಧ್ಯವ್ಯಾಪಕತ್ವೇ ಸಾಧನಾವ್ಯಾಪಕತ್ವಾತ್ ಆರ್ದ್ರೇಂಧನಸಂಯೋಗ ಉಪಾಧಿಃ । ಸೋಪಾಧಿಕತ್ವಾತ್ ವಹ್ನಿಮತ್ತ್ವಂ ವ್ಯಾಪ್ಯತ್ವಾಸಿದ್ಧಮ್ ॥**

ಉಪಾಧಿಯಿಂದ ಕೂಡಿರುವ ಹೇತುವು ವ್ಯಾಪ್ಯತ್ವಾಸಿದ್ಧವಾಗುತ್ತದೆ. ಇದರಿಂದ ವ್ಯಾಪ್ತಿಜ್ಞಾನಪ್ರತಿಬಂಧವುಂಟಾಗುತ್ತದೆ. ಸಾಧ್ಯವ್ಯಾಪಕವಾಗಿದ್ದು ಸಾಧನಕ್ಕೆ ಅವ್ಯಾಪಕವಾಗಿದ್ದರೆ ಅದು ಉಪಾಧಿಯಾಗುತ್ತದೆ. ಆರ್ದ್ರೇಂಧನಸಂಯೋಗದಲ್ಲಿ ಈ ಉಪಾಧಿಲಕ್ಷಣ ಬರುತ್ತದೆ. ಪರ್ವತದಲ್ಲಿ ಧೂಮಸಾಧ್ಯವಾಗಿದ್ದು ವಹ್ನಿ ಹೇತುವಾಗಿರುವಾಗ ಇದು ಉಪಾಧಿ. ವಹ್ನಿಮತ್ತ್ವ ಎಂದರೆ ವಹ್ನಿಯೇ ಆಗುತ್ತದೆ. ಮತುಪ್ ಪ್ರತ್ಯಯದ ಮೇಲೆ ಭಾವಪ್ರತ್ಯಯ (ತ್ವ) ಮಾಡಿದರೆ ಮತುಪಿನ ಪ್ರಕೃತ್ಯರ್ಥವನ್ನು ಕೊಡುತ್ತದೆ. ಮತುಪಿಗೆ ಪ್ರಕೃತಿ ವಹ್ನಿಯೇ ಆಗಿದೆ. ಆರ್ದ್ರೇಂಧನಸಂಯೋಗವೆಂದರೆ ಹಸಿ ಕಟ್ಟಿಗೆಯ ಸಂಬಂಧ. ಹಸಿ ಕಟ್ಟಿಗೆಯಾದರೆ ಹೊಗೆ ಹೆಚ್ಚಾಗಿ ಬರುತ್ತದೆ. ಪರ್ವತ ಹೊಗೆಯುಳ್ಳದ್ದು. ವಹ್ನಿಯಿಂದ. ಎಂಬಲ್ಲಿ ಈ ಆರ್ದ್ರೇಂಧನಸಂಯೋಗವು ಉಪಾಧಿ, ಸಾಧ್ಯ= ಧೂಮ. ಹೇತು= ವಹ್ನಿ. ಆರ್ದ್ರೇಂಧನಸಂಯೋಗರೂಪಉಪಾಧಿಯು ಧೂಮರೂಪಸಾಧ್ಯಕ್ಕೆ ವ್ಯಾಪಕವಾಗಿಯೂ ವಹ್ನಿರೂಪ ಸಾಧನಕ್ಕೆ (ಹೇತು) ಅವ್ಯಾಪಕವಾಗಿಯೂ ಇದೆ. ಸಾಧ್ಯವ್ಯಾಪಕತ್ವ ಎಂದರೆ 'ಸಾಧ್ಯಸಮಾನಾಧಿಕರಣಾತ್ಯಂತಾಭಾವಪ್ರತಿಯೋಗಿತ್ವಂ'ಎಂದರ್ಥ. ಸಾಧ್ಯದ ಅಧಿಕರಣದಲ್ಲಿರುವ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿರಬಾರದು. ಸಾಧ್ಯದ ಅಧಿಕರಣದಲ್ಲಿ ಅದರ ಅತ್ಯಂತಾಭಾವ ಹೇಳಲು ಬರಬಾರದು. ಸಾಧ್ಯಧೂಮ. ಸಾಧ್ಯಸಮಾನಾಧಿಕರಣಾತ್ಯಂತಾಭಾವ = ಸಾಧ್ಯಾಧಿಕರಣದಲ್ಲಿ ಹೇಳಲು ಸಾಧ್ಯವಾದ ಅತ್ಯಂತಾಭಾವ. ಸಾಧ್ಯಾಧಿಕರಣ = ಧೂಮಾಧಿಕರಣ = ಅಡಿಗೆಮನೆ (ಮಹಾನಸ) ಅಲ್ಲಿರುವ ಅತ್ಯಂತಾಭಾವ = ಪಾಷಾಣದ ಅತ್ಯಂತಾಭಾವ. ( ಕಲ್ಲು ಇಲ್ಲ ಎಂಬ ಅಭಾವ ) ಅಭಾವಕ್ಕೆ ಪ್ರತಿಯೋಗಿ ಕಲ್ಲು. ಅಪ್ರತಿಯೋಗಿ ಆರ್ದ್ರೇಂಧನಸಂಯೋಗ. ಅಲ್ಲಿ ಧೂಮವಿರುವಾಗ ಆರ್ದ್ರೇಂಧನಸಂಯೋಗ ಇಲ್ಲ ಎಂದು ಹೇಳಲು ಸಾಧ್ಯವಿಲ್ಲ. ಹೀಗೆ ಸಾಧ್ಯವಾಪಕತ್ವ ಆರ್ದ್ರೇಂಧನ ಸಂಯೋಗದಲ್ಲಿ ಬರುತ್ತದೆ. ಸಾಧನಾವ್ಯಾಪಕತ್ವ ಅಂದರೆ "ಸಾಧನವನ್ನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವ" ಎಂದರ್ಥ. ಸಾಧನದ ಅಧಿಕರಣದಲ್ಲಿ ಅದರ ಅಭಾವ ಹೇಳಲು ಸಾಧ್ಯವಿದ್ದರೆ ಅವ್ಯಾಪಕವಾಗುತ್ತದೆ. ಪ್ರಕೃತ ಸಾಧನ ವಹ್ನಿ. ಸಾಧನವತ್ =ವಹ್ನಿಯಿಂದ ಕೂಡಿರುವುದು. ಅಯೋಗೋಲಕ =ಕಾದಕಬ್ಬಿಣದ ಉಂಡೆ. ಅದರಲ್ಲಿರುವ ಅತ್ಯಂತಾ

ಭಾವ ಅಂದರೆ ಅಲ್ಲಿ ಆರ್ದ್ರೇಂಧನ ಸಂಯೋಗ ಇಲ್ಲದಿರುವುದರಿಂದ ಆರ್ದ್ರೇಂಧನಸಂಯೋಗದ ಅತ್ಯಂತಾಭಾವ. ಅಭಾವಕ್ಕೆ ಪ್ರತಿಯೋಗಿ= ಆರ್ದ್ರೇಂಧನ ಸಂಯೋಗ ಆಗುತ್ತದೆ. ಆದುದರಿಂದ ಸಾಧನ ಅವ್ಯಾಪಕತ್ವ ಅದರಲ್ಲಿ ಬರುತ್ತದೆ. ಎಲ್ಲೆಲ್ಲಿ ಧೂಮವಿದೆಯೋ ಅಲ್ಲಲ್ಲಿ ಆರ್ದ್ರೇಂಧನಸಂಯೋಗವಿದೆ. ಆದುದರಿಂದ ಧೂಮವ್ಯಾಪಕವಾಗುತ್ತದೆ. ಎಲ್ಲೆಲ್ಲಿ ವಹ್ನಿಯೋ ಅಲ್ಲಲ್ಲಿ ಆರ್ದ್ರೇಂಧನ ಸಂಯೋಗ ಇಲ್ಲ. (ಕಾದಕಬ್ಬಿಣದಲ್ಲಿ ಇಲ್ಲ). ಹೀಗೆ ಸಾಧ್ಯವ್ಯಾಪಕತ್ವೇ ಸತಿ ಸಾಧನ ಅವ್ಯಾಪಕತ್ವ ರೂಪ ಲಕ್ಷಣ ಆರ್ದ್ರೇಂಧನ ಸಂಯೋಗದಲ್ಲಿ ಬರುವುದರಿಂದ ಅದು ಉಪಾಧಿಯಾಗುತ್ತದೆ. ವಹ್ನಿರೂಪ ಹೇತುವು ಉಪಾಧಿಸಹಿತವಾದುದರಿಂದ ವ್ಯಾಪ್ಯತ್ವಾಸಿದ್ಧವಾಗುತ್ತದೆ. ಇಲ್ಲಿ ಧೂಮವ್ಯಾಪಕತ್ವವು ಆರ್ದ್ರೇಂಧನ ಸಂಯೋಗದಲ್ಲಿ ಬಂದರೆ ಅರ್ಥಾತ್ ಆರ್ದ್ರೇಂಧನಸಂಯೋಗವ್ಯಾಪ್ಯತ್ವವು ಧೂಮದಲ್ಲಿ ಬರುತ್ತದೆ. ಹಾಗೆಯೇ ಸಾಧನಾವ್ಯಾಪ್ಯತ್ವವು (ವಹ್ನ್ಯವ್ಯಾಪ್ಯತ್ವ) ಆರ್ದ್ರೇಂಧನ ಸಂಯೋಗದಲ್ಲಿ ಬಂದರೆ ಅದರ ಅವ್ಯಾಪ್ಯತ್ವವು ವಹ್ನಿಯಲ್ಲಿದೆಯೆಂದು ತಿಳಿಯುತ್ತದೆ. ಆಗ ವ್ಯಭಿಚಾರಿ ಎಂದಾಗುತ್ತದೆ. ಉಪಾಧಿವ್ಯಭಿಚರಿತತ್ವವು ಸಾಧನದಲ್ಲಿ ತಿಳಿದರೆ ಆಗ ಉಪಾಧಿಯಾದ ಆರ್ದ್ರೇಂಧನಸಂಯೋಗವ್ಯಾಪ್ಯಧೂಮವ್ಯಭಿಚಾರಿತ್ವವೂ ಸಾಧದನಲ್ಲಿ ಬರುತ್ತದೆ. ವಹ್ನಿ ಇದ್ದ ಎಲ್ಲಾ ಪ್ರದೇಶದಲ್ಲಿ ಆರ್ದ್ರೇಂಧನ ಸಂಯೋಗವು ಇಲ್ಲವೆಂದ ಮೇಲೆ ವಹ್ನಿಯು ಆರ್ದ್ರೇಂಧನ ಸಂಯೋಗವಿಲ್ಲದಿರುವಲ್ಲಿಯೂ ಇರುತ್ತದೆ ಎಂದಾಯಿತು. ಅದು ಇಲ್ಲದೇ ಇರುವಲ್ಲಿ ಇರುವುವೇ ವ್ಯಭಿಚಾರಿ. ಉಪಾಧಿವ್ಯಭಿಚಾರಿ ವಹ್ನಿಯಾಯಿತು. (ಆರ್ದ್ರೇಂಧನ ಸಂಯೋಗ ಇಲ್ಲದಿರುವಲ್ಲಿ ಇರುವುದರಿಂದ) ಉಪಾಧಿಗೇ ವ್ಯಭಿಚಾರಿಯಾದ ಮೇಲೆ ಉಪಾಧಿವ್ಯಾಪ್ಯವಾದದ್ದು ಧೂಮ. ಆಗ ಧೂಮದ ವ್ಯಭಿಚಾರಿಯು ವಹ್ನಿಯೆಂದು ತಿರುಗಿ ಹೇಳಬೇಕಾಗಿಲ್ಲ. ವ್ಯಾಪಕಕ್ಕೇ ವ್ಯಭಿಚಾರಿಯಾದ ಮೇಲೆ ವ್ಯಾಪ್ಯಕ್ಕೆ ಆಗಿಯೇ ಆಗುತ್ತದೆ. ಧೂಮಕ್ಕೆ ವ್ಯಾಪಕ ಆರ್ದ್ರೇಂಧನ ಸಂಯೋಗ. ಅದಕ್ಕೆ ವಹ್ನಿಯು ವ್ಯಭಿಚಾರಿಯಾದಮೇಲೆ ಅದರಿಂದ ವ್ಯಾಪ್ಯವಾದ ಧೂಮಕ್ಕೂ ವ್ಯಭಿಚಾರಿಯಾಗುತ್ತದೆ. ಇದರಿಂದ ಅನುಮಾನ ಹೀಗೆ ಮಾಡಬಹುದು. ಹಿಂದಿನ ಅನುಮಾನದಲ್ಲಿರುವ ಹೇತುವೇ ಇಲ್ಲಿ ಪಕ್ಷ."ವಹ್ನಿಃ ಧೂಮವ್ಯಭಿಚಾರೀ. ಧೂಮವ್ಯಾಪಕ ಆರ್ದ್ರೇಂಧನಸಂಯೋಗ ವ್ಯಭಿಚಾರಿ

ತ್ವಾತ್. ಘಟತ್ವಾದಿವತ್." ಬೆಂಕಿಯು ಧೂಮಕ್ಕೆ ವ್ಯಾಪಕವಾದ ಆರ್ದ್ರೇಂಧನ ಸಂಯೋಗಕ್ಕೆ ವ್ಯಭಿಚಾರಿಯಾದುದರಿಂದ (ಅದು ಇಲ್ಲದಿರುವಲ್ಲಿ ಇರುವುದರಿಂದ) ಧೂಮವ್ಯಭಿಚಾರಿಯಾಗುತ್ತದೆ. ಘಟತ್ವದಂತೆ. ಆರ್ದ್ರೇಂಧನ ಸಂಯೋಗ ಇಲ್ಲದಿರುವ ಘಟದಲ್ಲಿ ಘಟತ್ವ ಇರುವುದರಿಂದ ಉಪಾಧಿವ್ಯಭಿಚಾರಿಯಾಗುತ್ತದೆ. ಆದುದರಿಂದಲೇ ಧೂಮವ್ಯಭಿಚಾರಿಯೂ ಆಗುತ್ತದೆ. ಧೂಮ ಇಲ್ಲದಿರುವಲ್ಲಿ ಇರುತ್ತದೆ. ಲೋಕದಲ್ಲಿ ಯಾವುದು ಯಾವಸಾಧ್ಯದ ವ್ಯಾಪಕಕ್ಕೆ ವ್ಯಭಿಚಾರಿಯಾಗಿರುತ್ತದೆಯೋ ಅದು ಸಾಧ್ಯಕ್ಕೆ ವ್ಯಭಿಚಾರಿಯೂ ಆಗಿರುತ್ತದೆ. ಈ ರೀತಿಯಾಗಿ ಪ್ರಕೃತಾನುಮಾನದಲ್ಲಿ ಹೇತುವಾದ ವಹ್ನಿರೂಪ ಪಕ್ಷದಲ್ಲಿ ಸಾಧ್ಯವ್ಯಭಿಚಾರವನ್ನು ಎತ್ತಿತೋರಿಸಿ ಕೊಡುವುದೇ ಉಪಾಧಿಗೆ ಫಲ. ವಹ್ನಿಯು ಧೂಮಾಭಾವವದ್ವೃತ್ತಿ ಅಂದರೆ ಧೂಮ ಇಲ್ಲದಿರುವಲ್ಲಿ ಇರುತ್ತದೆ ಎಂದು 'ಸಾಧ್ಯಾಭಾವವದ್ವೃತ್ತಿತ್ವ'ರೂಪ ವ್ಯಭಿಚಾರ ಜ್ಞಾನವು ವಹ್ನಿಯಲ್ಲಿ ಉಂಟಾದರೆ ·ಧೂಮಾಭಾವವದ ವೃತ್ತಿತ್ವರೂಪ (ಧೂಮ ಇಲ್ಲದಿರುವಲ್ಲಿ ಇಲ್ಲದಿರುವುದು) ವ್ಯಾಪ್ತಿಜ್ಞಾನ ಬರುವುದಿಲ್ಲ.

**ಯಸ್ಯ ಸಾಧ್ಯಾಭಾವಃ ಪ್ರಮಾಣಾಂತರೇಣ ನಿಶ್ಚಿತಃ ಸಃಬಾಧಿತಃ। ಯಥಾ ವಹ್ನಿರನುಷ್ಣಃ ದ್ರವ್ಯತ್ವಾತ್, ಇತಿ। ಅತ್ರಾನುಷ್ಣತ್ವಂ ಸಾಧ್ಯಂ ತದಭಾವ ಉಷ್ಣತ್ವಂ ಸ್ಪರ್ಶೇನ ಪ್ರತ್ಯಕ್ಷೇಣ ಗೃಹ್ಯತ ಇತಿ ಬಾಧಿತತ್ವಂ॥**

## ಇತಿ ಅನುಮಾನ ಪರಿಚ್ಛೇದಃ

ಬಾಧ ದೋಷವನ್ನು ತೋರಿಸುತ್ತಾನೆ. ಯಾವ ಹೇತುವಿನ ಸಾಧ್ಯದ ಅಭಾವವು ಪ್ರತ್ಯಕ್ಷಾದಿ ಪ್ರಮಾಣಗಳಿಂದ ನಿಶ್ಚಿತವಾಗಿರುತ್ತದೆಯೋ ಅದು ಬಾಧಿತವಾಗುತ್ತದೆ. ಬೆಂಕಿಯು ಅನುಷ್ಣ (ಶೀತ) ವಾಗಿದೆ. ದ್ರವ್ಯತ್ವ ಇರುವುದರಿಂದ. ಇಲ್ಲಿ ಬೆಂಕಿಯಲ್ಲಿ ಉಷ್ಣತ್ವವಿಲ್ಲವೆಂದು ಸಾಧಿಸಲು ದ್ರವ್ಯತ್ವರೂಪ ಹೇತು ಉಪಾತ್ತವಾಗಿದೆ. ಆದರೆ ಅದಕ್ಕೆ ಸಾಧಿಸಲು ಸಾಮರ್ಥ್ಯ ಇಲ್ಲ. ಬೆಂಕಿಯಲ್ಲಿ ಸಾಧ್ಯದ ಅಭಾವ= ಉಷ್ಣತ್ವಾಭಾವಾಭಾವವು (ಅಂದರೆ ಉಷ್ಣತ್ವವು) ಇದೆಯೆಂದು ಮುಟ್ಟಿತಿಳಿದುದರಿಂದ ಸ್ಪರ್ಶಪ್ರತ್ಯಕ್ಷದಿಂದ ನಿಶ್ಚಿತವಾಗಿದೆ· ಪ್ರತ್ಯಕ್ಷವಾಗಿ ಸಾಧ್ಯಾಭಾವದ ನಿಶ್ಚಯವು ಬೆಂಕಿಯಲ್ಲಿರುವಾಗ ಅಲ್ಲಿ

ಸಾಧ್ಯಾನುಮಿತಿ ಬರುವುದಿಲ್ಲ. 'ವಹ್ನಿಃ ಅನುಷ್ಣಃ' ಎಂಬಅನುಮಿತಿಗೆ ಸಾಧ್ಯಾಭಾವದ ನಿಶ್ಚಯವು ಪ್ರತಿಬಂಧಕವಾಗುತ್ತದೆ. ಬಾಧಿತವಾದ ಸಾಧ್ಯವಿರುವುದರಿಂದಲೇ ಬಾಧಿತಹೇತುವಾಗುತ್ತದೆ. ಹೀಗೆ ಐದು ಹೇತ್ವಾಭಾಸಗಳನ್ನು ಅಲ್ಲಲ್ಲಿ ಉದಾಹರಣೆಗಳಿಂದ ಚೆನ್ನಾಗಿ ತಿಳಿದುಕೊಳ್ಳಬೇಕು. ಯಥಾರ್ಥಾನುಭವದ ಭೇದವಾದ ಅನುಮಿತಿಯನ್ನು ನಿರೂಪಿಸುವಾಗ ಇವೆಲ್ಲವೂ ಉಪಸ್ಥಿತಗಳಾದುದರಿಂದ ಇಲ್ಲಿ ವಿವರಿಸಿರುತ್ತಾನೆ. ಅನುಮಾನ ಪ್ರಕರಣ ಮುಗಿದಿದೆ.

---

# ಉಪಮಾನಪರಿಚ್ಛೇಧಃ

ಉಪಮಿತಿಕರಣಮುಪಮಾನಮ್ । ಸಂಜ್ಞಾಸಂಜ್ಞಿಸಂಬಂಧ ಜ್ಞಾನಂ ಉಪಮಿತಿಃ। ತತ್ಕರಣಂ ಸಾದೃಶ್ಯಜ್ಞಾನಮ್। ತಥಾ ಹಿ– ಕಶ್ಚಿದ್ಗವಯಪದಾರ್ಥಮಜಾನನ್ ಕುತಶ್ಚಿದಾರಣ್ಯಕಪುರುಷಾತ್ ಗೋಸದೃಶೋ ಗವಯ ಇತಿ ಶ್ರುತ್ವಾ ವನಂ ಗತೋ ವಾಕ್ಯಾರ್ಥಂ ಸ್ಮರನ್ ಗೋಸದೃಶಂ ಪಿಂಡಂ ಪಶ್ಯತಿ, ತದನಂತರಮಸೌ ಗವಯ ಪದವಾಚ್ಯ ಇತ್ಯುಪಮಿತಿರುತ್ಪದ್ಯತೇ॥

## ಇತಿ ಉಪಮಾನ ಪರಿಚ್ಛೇದಃ–

ಉಪಮಾನಲಕ್ಷಣ ಹೇಳುತ್ತಾನೆ. ಉಪಮಿತಿರೂಪ ಪ್ರಮಾಜ್ಞಾನಕ್ಕೆ ಕರಣವಾದದ್ದು ಉಪಮಾನ. ವ್ಯಾಪಾರದಿಂದ ಕೂಡಿ ಅಸಾಧಾರಣಕಾರಣ ಯಾವುದೋ ಅವೇ ಕರಣ ಎಂದು ಹಿಂದೆಹೇಳಿದೆ. ಸಾದೃಶ್ಯದಿಂದ ಕೂಡಿದ ಪದಾರ್ಥಜ್ಞಾನವೇ ಉಪಮಾನವಾಗುತ್ತದೆ. 'ಸಂಜ್ಞಾಸಂಜ್ಞಿ-' ವಾಕ್ಯದಿಂದ ಉಪಮಿತಿಯ ಲಕ್ಷಣ ಹೇಳುತ್ತಾನೆ. ಸಂಜ್ಞಾ ಎಂದರೆ ಪದ. ಸಂಜ್ಞಿ ಅಂದರೆ ಪದಾರ್ಥ. ಅವುಗಳ ಸಂಬಂಧ ಅಂದರೆ ಶಕ್ತಿಯಾಗುತ್ತದೆ. ಪದ ಪದಾರ್ಥಸಂಬಂಧಜ್ಞಾನವೇ ಉಪಮಿತಿಯಾಗುತ್ತದೆ. ಅತಿದೇಶವಾಕ್ಯಾರ್ಥ ಜ್ಞಾನ ಉಪಮಾನವಾಗುತ್ತದೆ. ಒಂದುಕಡೆ ಕೇಳಿದ್ದನ್ನು (ನೋಡಿದ್ದನ್ನು) ಇನ್ನೊಂದುಕಡೆ ಆರೋಪಿಸಿಕೊಳ್ಳುವುದಕ್ಕೆ ಅತಿದೇಶವೆಂದು ಹೆಸರು. ಈ ಅತಿದೇಶವಾಕ್ಯಾರ್ಥಸ್ಮರಣೆಯೇ ವ್ಯಾಪಾರ. ಇವುಗಳಿಗೆ ಉಪಮಿತಿ ಜ್ಞಾನವೇ ಫಲ. ಸಾದೃಶ್ಯಜ್ಞಾನದಿಂದ ಪದಪದಾರ್ಥಸಂಬಂಧಜ್ಞಾನ ವುಂಟಾಗುತ್ತದೆ. "ತಥಾಹಿ–" ವಾಕ್ಯದಿಂದ ಉಪಮಿತಿಯುಂಟಾಗುವ ರೀತಿ ಯನ್ನು ತೋರಿಸುತ್ತಾನೆ. ಒಬ್ಬನಿಗೆ 'ಗವಯ' ಎಂದರೆ ಏನೆಂದು ತಿಳಿದಿರು ವುದಿಲ್ಲ. ಅವನು ಯಾವನೋ ಒಬ್ಬ ಕಾಡಿನ ಮನುಷ್ಯನಿಂದ'ಗೋವಿಗೆ(ಹಸು ವಿಗೆ) ಸಮಾನವಾದದ್ದು ಗವಯ ಎಂಬ ಪ್ರಾಣಿ' ಎಂದು ಯಾವಾಗಲೋ ಕೇಳಿರುತ್ತಾನೆ. ಒಂದು ಸಮಯ ಕಾಡಿಗೆ ಹೋದಾಗ ಹಸುವಿನಂತಿರುವ

ಒಂದು ಪ್ರಾಣಿಯನ್ನು ನೋಡುತ್ತಾನೆ. ಆಗ ಅತಿದೇಶವಾಕ್ಯಾರ್ಥವನ್ನು ಸ್ಮರಿಸುತ್ತಾನೆ. (ಕಾಡುಮನುಷ್ಯನು "ಗವಯವೆಂಬುದು ಗೋಸಮಾನವಾಗಿದೆ" ಎಂದು ಹಿಂದೆ ಹೇಳಿದ್ದನು) ಆದ್ದರಿಂದ ಅವನಿಗೆ 'ಇದು ಗವಯಪದವಾಚ್ಯವಾಗಿದೆ'ಎಂಬ ಉಪಮಿತಿ ಹುಟ್ಟುತ್ತದೆ. "ಗೋಸದೃಶಃ ಗವಯಪದವಾಚ್ಯಃ" (ಗೋವಿಗೆ ಸಮಾನವಾದದ್ದು ಗವಯ ಎಂಬ ಪದದಿಂದ ಹೇಳಿಸಿಕೊಳ್ಳುವ ಪ್ರಾಣಿ) ಇದು ಅತಿದೇಶವಾಕ್ಯ. ಇಲ್ಲಿ ಗೋಸದೃಶಃ (ಗೋವಿಗೆ ಸಮಾನವಾದದ್ದು) ಎಂಬುದು ವಿಶೇಷ್ಯ. ಇಲ್ಲಿ ಗೋಸಾದೃಶ್ಯ ವಿಶೇಷಣವಾಗಿ ತೋರುತ್ತದೆ. ಗೋಸದೃಶದಲ್ಲಿರುವ ವಿಶೇಷ್ಯತೆಯು ಗೋಸಾದೃಶ್ಯಾವಚ್ಛಿನ್ನವಾಗಿರುತ್ತದೆ. ವಿಶೇಷ್ಯತೆಯನ್ನು ನಿರೂಪಿಸುವುದು ಜ್ಞಾನ. (ನಿರೂಪಕ). ಆಗ ಗೋಸಾದೃಶ್ಯಾವಚ್ಛಿನ್ನವಿಶೇಷ್ಯತಾಕಜ್ಞಾನವಾಗುತ್ತದೆ. (ವಿಶೇಷ್ಯತಾ ನಿರೂಪಕ ವಿಶೇಷ್ಯಕ) ಗವಯಪದವಾಚ್ಯಃ ಎಂಬಲ್ಲಿ ಗವಯಪದವಾಚ್ಯತ್ವವು ಪ್ರಕಾರ. (ವಿಶೇಷಣ) ಪ್ರಕಾರತಾ ಅದರಲ್ಲಿದೆ. ಅದನ್ನು ನಿರೂಪಿಸುವುದೂ ಜ್ಞಾನವಾದುದರಿಂದ ಪ್ರಕಾರಕವಾಗುತ್ತದೆ. 'ಗೋಸಾದೃಶ್ಯಾವಚ್ಛಿನ್ನವಿಶೇಷ್ಯಕ ಗವಯಪದವಾಚ್ಯತ್ವಪ್ರಕಾರಕ ಜ್ಞಾನವೇ' ಉಪಮಾನ. ಇದರಿಂದ 'ಗವಯಃ ಗವಯಪದವಾಚ್ಯಃ' ಎಂಬ ಉಪಮಿತಿ ಹುಟ್ಟುತ್ತದೆ. (ಈ ಪ್ರಾಣಿ ಗವಯ ಪದದಿಂದ ಕರೆಯಲ್ಪಡುವುದು.) ಇದು ಸಾದೃಶ್ಯದಿಂದ ಕೂಡಿದ ಪಿಂಡಜ್ಞಾನದಿಂದಲೂ, ಅಸಾಧಾರಣಧರ್ಮದಿಂದಕೂಡಿದ ಪಿಂಡಜ್ಞಾನದಿಂದಲೂ, ವೈಧರ್ಮ್ಯದಿಂದಕೂಡಿದ ಪಿಂಡಜ್ಞಾನದಿಂದಲೂ ಬರುತ್ತದೆ. ಇಲ್ಲಿ ಉದಾಹರಿಸಿರುವುದು ಮೊದಲನೆಯದಕ್ಕೆ ಉದಾಹರಣೆಯಾಗುತ್ತದೆ. ಎರಡನೆಯದಕ್ಕೆ ಉದಾರಣೆ. ಖಡ್ಗಮೃಗ ಹೇಗಿದೆ? ಎಂದು ಒಬ್ಬನು ಕೇಳಿದರೆ ಆಗ ತಿಳಿದವನು 'ಮೂಗಿನಮೇಲೆ ಒಂದು ಕೊಂಬಿನಿಂದಕೂಡಿದ್ದು ಆನೆಯ ದೇಹದಂತಿರುವುದು' ಎಂದು ವಿಶೇಷಲಕ್ಷಣ ಹೇಳುತ್ತಾನೆ. ಅದರಂತೆ ಇರುವುದನ್ನು ನೋಡಿದಾಗ ಹಿಂದೆ ಹೇಳಿದ ವಾಕ್ಯಾರ್ಥವನ್ನು ಸ್ಮರಿಸಿಕೊಂಡು 'ಖಡ್ಗಮೃಗ ಎಂದು ಕರೆಯಲ್ಪಡುವುದು ಇದು' ಎಂದು ಉಪಮಿತಿಜ್ಞಾನವನ್ನು ಹೊಂದುತ್ತಾನೆ. ಮೂರನೆಯದಕ್ಕೆ ಉದಾರಣೆ. ಒಂಟೆ ಹೇಗಿದೆ? ಎಂದು ತಿಳಿಯದವನು ಕೇಳಿದಾಗ ತಿಳಿದವನು 'ಕುದುರೆಯಂತೆ ಒಂದೇ ರೀತಿಯಾದ ಬೆನ್ನುಳ್ಳದ್ದಲ್ಲ. ಕತ್ತು ಅದರಂತೆ ಚಿಕ್ಕದಾಗಿರುವುದಿಲ್ಲ.' ಎನ್ನುತ್ತಾನೆ. ಕಾಲಕಳೆದಮೇಲೆ

ಒಂದು ಸಾರಿ ಒಂಟೆ ನೋಡಿದಾಗ ಅವನು ಕುದುರೆಗಿಂತ ಇದು ವಿಲಕ್ಷಣವಾ ಗಿದೆ ಎಂದು ಹಿಂದೆ ಕೇಳಿದ ವಾಕ್ಯಾರ್ಥವನ್ನು ಸ್ಮರಿಸಿಕೊಂಡು ಇದು ಉಷ್ಟ್ರ (ಒಂಟೆ) ಎಂದು ಕರೆಯಲ್ಪಡುವುದು' ಎಂದು ತಿಳಿಯುತ್ತಾನೆ. ಇದೂ ಉಪಮಿತಿ ಜ್ಞಾನವಾಗುತ್ತದೆ.

ಹೀಗೆ ಉಪಮಾನ ಪ್ರಕರಣ ಮುಗಿದಿದೆ.

## ಶಬ್ದಪರಿಚ್ಛೇಧಃ

**ಆಪ್ತವಾಕ್ಯಂ ಶಬ್ದಃ। ಆಪ್ತಸ್ತು ಯಥಾರ್ಥವಕ್ತಾ। ವಾಕ್ಯಂ ಪದಸಮೂಹಃ। ಯಥಾ ಗಾಮಾನಯೇತಿ। ಶಕ್ತಂ ಪದಮ್। ಅಸ್ಮಾತ್ಪದಾದಯಮರ್ಥೋ ಬೋದ್ಧವ್ಯ ಇತೀಶ್ವರಸಂಕೇತಃ ಶಕ್ತಿಃ॥**

ಶಾಬ್ದಪ್ರಮಾಜ್ಞಾನವನ್ನು ತೋರಿಸಲು ಅದಕ್ಕೆ ಕಾರಣವಾದ ಶಬ್ದ ಪ್ರಮಾಣವನ್ನು ಮೊದಲು ತೋರಿಸುತ್ತಾನೆ. ಆಪ್ತನಿಂದ ಉಚ್ಚರಿತವಾದ ವಾಕ್ಯವೇ ಶಬ್ದ. (ಪ್ರಮಾಣ) ವಾಸ್ತವವನ್ನು ಹೇಳುವವನೇ ಆಪ್ತ. ಪದಗಳ ಸಮುದಾಯವೇ ವಾಕ್ಯ. 'ಹಸುವನ್ನು ತಾ' ಎಂಬುದು ವಾಕ್ಯ. (ನಿರೂಪಕತಾ ಸಂಬಂಧದಿಂದ) ಶಕ್ತಿಯಿಂದ ಕೂಡಿರುವುದು= ಶಕ್ತಿಗೆಆಶ್ರಯವಾದದ್ದು ಶಕ್ತ. ಪದವೇ ಶಕ್ತ. 'ಈ ಪದದಿಂದ ಈ ಅರ್ಥವು ತಿಳಿಯಬೇಕು' ಎಂಬ ಈಶ್ವರ ಸಂಕೇತವೇ ಶಕ್ತಿ. ಇದು ಇಚ್ಛಾರೂಪವಾಗಿರುತ್ತದೆ.

'ಆಪ್ತೋಚ್ಚರಿತತ್ವೇ ಸತಿ ವಾಕ್ಯತ್ವಂ' ಶಬ್ದದ ಲಕ್ಷಣ. ಆಪ್ತನಿಂದ ಉಚ್ಚರಿಸಲ್ಪಟ್ಟಿರುವ ವಾಕ್ಯವೆಂದರ್ಥ. ಕೇವಲವಾಕ್ಯವೇ ಶಬ್ದವೆಂದರೆ ಅನಾಪ್ತನು (ಮೋಸಗಾರ ಶತ್ರು ಮುಂತಾದವರು) ಹೇಳಿದ ವಾಕ್ಯವೂ ಶಬ್ದ ಪ್ರಮಾಣವಾಗಬೇಕಾಗುತ್ತದೆ. ಆದುದರಿಂದ ಆಪ್ತೋಚ್ಚರಿತವಾಗಿರಬೇಕೆಂದು ಸತ್ಯಂತ ಹೇಳಿದೆ. ಕೇವಲ 'ಆಪ್ತನು ಉಚ್ಚರಿಸಿರುವುದು' ಎಂದರೆ ಅವನು 'ಕಚಟತಪ' ಎಂದು ಉಚ್ಚರಿಸಿದಾಗ ಅದೂ ಶಬ್ದಪ್ರಮಾಣವಾಗಬೇಕಾಗುತ್ತದೆ. ಆದರೆ ಅದು ಅರ್ಥವಿಲ್ಲದಿರುವುದರಿಂದ ಪ್ರಮಾಣವಲ್ಲ. ಅದಕ್ಕೋಸ್ಕರ ವಾಕ್ಯವೆಂದಿವೆ. ಲಕ್ಷಣ ಹೇಳುವಾಗ ಧರ್ಮಬೋಧಕ ತ್ವ ಪ್ರತ್ಯಯ ಸೇರಿಸಿ ಹೇಳಬೇಕು. 'ಪ್ರಯೋಗ ಹೇತುಭೂತಯಥಾರ್ಥಜ್ಞಾನವತ್ತ್ವಂ ಆಪ್ತತ್ವಮ್' ಅರ್ಥವನ್ನು ತಿಳಿದು ಶಬ್ದಪ್ರಯೋಗಮಾಡುವುದು ಲೋಕದಲ್ಲಿ ಪ್ರಸಿದ್ಧವಾಗಿದೆ. ಆದುದರಿಂದ ಶಬ್ದವನ್ನು ಪ್ರಯೋಗಿಸಬೇಕಾದರೆ ಮೊದಲು ಅದರ ಅರ್ಥ ತಿಳಿದಿರಬೇಕು. ಅದನ್ನೇ ಇಲ್ಲಿ ಹೇಳಿದೆ. ವಾಕ್ಯಪ್ರಯೋಗಕ್ಕೆ ಕಾರಣವಾದ ವಾಸ್ತವ ಅರ್ಥಜ್ಞಾನವುಳ್ಳವನೇಆಪ್ತನು. ಇದ್ದುದನ್ನು ಇದ್ದಂತೇ ತಿಳಿದವನು. ಇದರಿಂದ 'ಪ್ರಯೋಗಹೇತುಭೂತಯಥಾರ್ಥಜ್ಞಾನಜನ್ಯಶಬ್ದತ್ವಂ'

ಎಂದು ಶಬ್ದಲಕ್ಷಣವಾಗುತ್ತದೆ. ವಾಕ್ಯಪ್ರಯೋಗಕ್ಕೆ ಕಾರಣವಾದ ಯಥಾರ್ಥಜ್ಞಾನದಿಂದ ಉಂಟಾದ (ಹೇಳಿದ) ಶಬ್ದವೇ ಪ್ರಮಾಣವಾದ ಶಬ್ದವಾಗುತ್ತದೆ. ಈ ರೀತಿಯಾದ ಶಬ್ದಕ್ಕೆ ಶಬ್ದಪ್ರಮಾಣವೆಂದು ಕರೆಯುತ್ತಾರೆ. ಪದಜ್ಞಾನವೇ ಕರಣ. "ವೃತ್ತಿಜ್ಞಾನಸಹಕೃತಪದಜ್ಞಾನಜನ್ಯ ಪದಾರ್ಥೋಪಸ್ಥಿತಿಃ ವ್ಯಾಪಾರಃ" ಕರಣವೆಂದರೆ ಅಲ್ಲಿ ವ್ಯಾಪಾರ ಇರಬೇಕು. ವ್ಯಾಪಾರದ ಮೂಲಕ ಅದು ಶಾಬ್ದಬೋಧಕ್ಕೆ ಕಾರಣವಾಗುತ್ತದೆ. ವೃತ್ತಿಜ್ಞಾನದಿಂದ ಕೂಡಿದ ಪದಜ್ಞಾನದಿಂದ ಬಂದ ಪದಾರ್ಥದ ಉಪಸ್ಥಿತಿಯೇ ವ್ಯಾಪಾರ. ಅಭಿಧಾ, ಲಕ್ಷಣಾ ಎಂದು ಎರಡು ವೃತ್ತಿಗಳಿವೆ. ಇವು ಪದಗಳಲ್ಲಿರುತ್ತವೆ. ಇವುಗಳಿಂದ ಶಾಬ್ದಬೋಧ ಅಂದರೆ ವಾಕ್ಯಾರ್ಥಜ್ಞಾನರೂಪ ಫಲವುಂಟಾಗುತ್ತದೆ. ಶಕ್ತಿಲಕ್ಷಣೆಗಳಲ್ಲಿ ಒಂದಾದುದೇ ವೃತ್ತಿ. ಶಕ್ತಿಯೆಂದರೆ ಈಶ್ವರಸಂಕೇತ. ಅದು "ಈ ಪದದಿಂದ ಈ ಅರ್ಥ ತೋರಬೇಕು" ಎಂದು ತೋರುವ ಈಶ್ವರೇಚ್ಛೆಯಾಗಿರುತ್ತದೆ. ಘಟ ಎಂಬ ಪದದಿಂದ ಈ ರೀತಿಯಾದ ಅರ್ಥ ತಿಳಿಯಬೇಕು, ಎಂಬ ಇಚ್ಛೆಯಲ್ಲಿ ಘಟ ವಿಶೇಷ್ಯವಾಗಿರುತ್ತದೆ. ವಿಶೇಷ್ಯತಾ ನಿರೂಪಕವು ಇಚ್ಛೆ. (ವಿಶೇಷ್ಯಕ) ಘಟಪದಜನ್ಯಬೋಧವಿಷಯವು (ಅಂದರೆ ಘಟವೆಂಬಪದದಿಂದುಂಟಾದ ತಿಳುವಳಿಕೆಯಲ್ಲಿ ವಿಷಯವಾಗಿರುವುದು) ಪ್ರಕಾರ. ಆಗ ಘಟವಿಶೇಷ್ಯಕ ಘಟಪದಜನ್ಯ ಬೋಧವಿಷಯತ್ವ ಪ್ರಕಾರಕ ಈಶ್ವರೇಚ್ಛೆಯೇ ಶಕ್ತಿಯಾಗುತ್ತದೆ. ಪದ ಶಕ್ತವಾಗಿದೆಯೆಂದರೆ ಶಕ್ತಿಗೆನಿರೂಪಕವಾಗಿದೆಯೆಂದರ್ಥ. ನಿರೂಪಕತಾ ಸಂಬಂಧದಿಂದ ಶಕ್ತಿವಿಶಿಷ್ಟವಾದದ್ದು ಪದ. ಶಕ್ತಿಗೆ ವಿಷಯ ಅರ್ಥ. ಇದಕ್ಕೆ ಶಕ್ಯವೆಂದು ಹೆಸರು. ವಿಷಯತಾಸಂಬಂಧದಿಂದ ಶಕ್ತಿಗೆ ಆಶ್ರಯವಾದದ್ದು ಶಕ್ಯ. ಅಭಿಧಾ, ಶಕ್ತಿ, ಇಚ್ಛಾ, ಸಂಕೇತ ಇವು ಪರ್ಯಾಯಪದಗಳು. ವಿಷಯೀ ಶಕ್ತಿಯಾಗುತ್ತದೆ. ಶಕ್ಯಸಂಬಂಧವೇ ಲಕ್ಷಣಾವೃತ್ತಿಯಾಗುತ್ತದೆ. ಗೌಣೀ, ಶುದ್ಧಾ ಎಂದು ಇದು ಎರಡುರೀತಿಯಾಗಿರುತ್ತದೆ. ಸಾದೃಶ್ಯದಿಂದ ಕೂಡಿರುವಲ್ಲಿ ಲಕ್ಷಣಾ ಬಂದರೆ ಗೌಣೀ ಆಗುತ್ತದೆ. 'ಹುಡುಗನು ಸಿಂಹ' ಎಂದರೆ ಇಲ್ಲಿ ಸಿಂಹ ಪದಕ್ಕೆ ಸಿಂಹಸದೃಶ, ಸಿಂಹಸಾದೃಶ್ಯದಿಂದಕೂಡಿದವ, ಎಂದರ್ಥವಾಗುತ್ತದೆ. ಸಿಂಹಪದಕ್ಕೆ ಶಕ್ಯಾರ್ಥ (ಶಕ್ತಿಯಿಂದಬರುವ ಅರ್ಥ) ಸಿಂಹಪ್ರಾಣಿ. ಸಿಂಹವೂ ಹುಡುಗನೂ ಒಂದಾಗುವುದಿಲ್ಲ. ಬಾಧಬರುವುದರಿಂದ ಲಕ್ಷಣಾವೃತ್ತಿಯನ್ನಾಶ್ರಯಿಸಿ ಸಿಂಹಪದಕ್ಕೆ ಸಿಂಹ

ಸಮಾನ ಎಂದರ್ಥ ಮಾಡಿದರೆ ಆಗ ಕ್ರೌರ್ಯಾದಿಗುಣಗಳು ಇಬ್ಬರಲ್ಲಿಯೂ ಇರುವುದರಿಂದ ಸಿಂಹಕ್ಕೆ ಸಮಾನ ಹುಡುಗ' ಎಂದರ್ಥವಾಗುತ್ತದೆ. ಸಾದೃಶ್ಯ ಸಂಬಂಧವನ್ನು ಬಿಟ್ಟು ಇತರ ಕಾರ್ಯಕಾರಣ ಭಾವಾದಿ ಸಂಬಂಧ ಮೂಲಕ ವಾಗಿಆರೋಪ ಬಂದರೆ ಅಲ್ಲಿ ಶುದ್ಧಲಕ್ಷಣಾವೃತ್ತಿಯೆಂದು ಹೇಳಬೇಕು. ಶುದ್ಧ ಲಕ್ಷಣೆಯು "ಜಹಲ್ಲಕ್ಷಣಾ" "ಅಜಹಲ್ಲಕ್ಷಣಾ" ಎಂದು ಎರಡು ವಿಧವಾಗಿದೆ. ಲಕ್ಷ್ಯತಾವಚ್ಛೇದಕರೂಪದಿಂದ ಲಕ್ಷ್ಯಾರ್ಥ ಮಾತ್ರಬೋಧಕ್ಕೆ ಪ್ರಯೋಜಕ ವಾದಲಕ್ಷಣೆಗೆಜಹಲ್ಲಕ್ಷಣಾಎಂದುಹೆಸರು. ಶಕ್ಯಾರ್ಥವೇವಾಚ್ಯಾರ್ಥ. ಅದನ್ನು ಸಂಪೂರ್ಣಬಿಟ್ಟು ಕೇವಲ ಲಕ್ಷ್ಯಾರ್ಥವನ್ನು ತಿಳಿಸುವುದು ಜಹಲ್ಲಕ್ಷಣಾ. ತನ್ನ ಅರ್ಥವನ್ನು ಬಿಟ್ಟು ಇನ್ನೊಂದರ್ಥವನ್ನು ತಿಳಿಸುವುದು. "ಗಂಗೆಯಲ್ಲಿ ಘೋಷ ವಿದೆ" (ಗೊಲ್ಲರಹಳ್ಳಿ) ಎಂಬುದು ಉದಾಹರಣೆ. ಇಲ್ಲಿ ಗಂಗಾಪದಕ್ಕೆ ಶಕ್ತಿ ಯಿಂದ ಪ್ರವಾಹ ಎಂಬ ಅರ್ಥ ತೋರುತ್ತದೆ. ಪ್ರವಾಹದಲ್ಲಿ ಗೊಲ್ಲರಹಳ್ಳಿ ಇರಲು ಸಾಧ್ಯವಿಲ್ಲ. ಆದುದರಿಂದ ಲಕ್ಷಣೆಯಿಂದ ಗಂಗಾಪದಕ್ಕೆ ತೀರ= ದಡ ಎಂದರ್ಥವಾಗುತ್ತದೆ. ಶಕ್ಯಾರ್ಥವಾದ ಪ್ರವಾಹದ ಸಂಬಂಧ ಅಂದರೆ ಸಾಮೀಪ್ಯವು ತೀರಕ್ಕೆ ಇದೆ. ಶಕ್ಯಸಂಬಂಧರೂಪ ಲಕ್ಷಣೆಯಿಂದ ಬಂದ ಅರ್ಥ ಲಕ್ಷ್ಯಾರ್ಥ. ಪ್ರಕೃತ ತೀರ ಲಕ್ಷ್ಯಾರ್ಥ. ಲಕ್ಷ್ಯತಾ ಅದರಲ್ಲಿದೆ. ಲಕ್ಷ್ಯತಾವಚ್ಛೇದಕ ತೀರತ್ವ. ತೀರತ್ವ ಧರ್ಮದಿಂದ ತೀರ ತೋರುತ್ತದೆ. ಪ್ರವಾಹರೂಪ ಶಕ್ಯಾರ್ಥಕ್ಕೆ ಯಾವ ರೀತಿಯಿಂದಲೂ ಪ್ರವೇಶವಿಲ್ಲ. ಪ್ರವಾಹ ರೂಪಾರ್ಥವನ್ನು ಬಿಟ್ಟು ಕೇವಲ ತೀರತ್ವರೂಪದಿಂದ ತೀರತೋರುವುದರಿಂದ ಜಹಲ್ಲಕ್ಷಣಾ ಆಗುತ್ತದೆ. ಲಕ್ಷ್ಯತಾವಚ್ಛೇಕರೂಪದಿಂದ ಲಕ್ಷ್ಯ, ಶಕ್ಯ ಎರಡು ಬೋಧಕ್ಕೂ ಪ್ರಯೋಜಕವಾದದ್ದು ಅಜಹಲ್ಲಕ್ಷಣಾಆಗುತ್ತದೆ. 'ಕಾಕೇಭ್ಯೋ ದಧಿ ರಕ್ಷ್ಯತಾಮ್' ಕಾಗೆಗಳಿಂದ ಮೊಸರನ್ನು ರಕ್ಷಿಸಿರಿ (ಮೊಸರು ರಕ್ಷಿಸಲ್ಪಡಲಿ) ಇದು ಅಜಹಲ್ಲಕ್ಷಣೆಗೆ ಉದಾಹರಣೆ. ಇಲ್ಲಿ ಕಾಕ ಪದಕ್ಕೆ ದಧ್ಯುಪಘಾತಕವಲ್ಲಿ (ಅಂದರೆ ಮೊಸರನ್ನು ನಾಶಪಡಿಸುವವುಗಳು ಯಾವುವು ಇವೆಯೋ ಅವೆಲ್ಲವುಗಳಲ್ಲಿ) ಲಕ್ಷಣಾ. ಲಕ್ಷ್ಯತಾ ಅದರಲ್ಲಿದೆ. ದಧ್ಯುಪಘಾತಕತ್ವವು ಲಕ್ಷ್ಯತಾವಚ್ಛೇದಕ. ದಧ್ಯುಪಘಾತಕತ್ವರೂಪದಿಂದ ಮೊಸರನ್ನು ತಿಂದು ಕೆಡಿಸುವ ಕಾಗೆ, ಬೆಕ್ಕು, ನಾಯಿ ಮುಂತಾದವುಗಳಿಗೆಲ್ಲಾ ಬೋಧ ಬರುತ್ತದೆ. ಶಕ್ಯ ಕಾಗೆಯಾಗುತ್ತದೆ. ಲಕ್ಷ್ಯ ಬೆಕ್ಕು ಮುಂತಾದವುಗಳು. ಶಕ್ಯಲಕ್ಷ್ಯ

ಉಭಯಬೋಧವುಂಟಾಗುತ್ತದೆ. ಕಾಕ ಪದವು ತನ್ನ ಅರ್ಥ ಬಿಡದೆ ಇನ್ನೊಂ
ದರ್ಥವನ್ನು ತಿಳಿಸಿಕೊಡುವುದರಿಂದ ಅಜಹಲ್ಲಕ್ಷಣಾ ಆಗುತ್ತದೆ. ಜಹಲ್ಲಕ್ಷಣಾ
ಅಜಹಲ್ಲಕ್ಷಣಾ ಇವೆರಡೂ ವೇದಾಂತಿಗಳು ಹೇಳುವ "ತತ್ತ್ವಮಸಿ" ಎಂಬ
ವಾಕ್ಯದಲ್ಲಿ ಬರುತ್ತವೆ. ಶಕ್ಯತಾವಚ್ಛೇದಕವನ್ನು ಬಿಟ್ಟು ಕೇವಲ ವ್ಯಕ್ತಿಬೋಧ
ಬರಲು ಇದು ಸಹಾಯಕವಾಗುತ್ತದೆ. ತತ್ ಎಂದರೆ ಸರ್ವಜ್ಞತ್ವವಿಶಿಷ್ಟನಾದ
ಬ್ರಹ್ಮ. ತ್ವಂ ಎಂದರೆ ಕಿಂಚಿಜ್ಞತ್ವ ವಿಶಿಷ್ಟವಾದ ಬ್ರಹ್ಮ (ಜೀವ) ಇವರಿಗೆ ಐಕ್ಯ
ಹೇಳಬೇಕಾದರೆ ಸರ್ವಜ್ಞತ್ವ, ಕಿಂಚಿಜ್ಞತ್ವ ಧರ್ಮ ಬಿಡಬೇಕು.

**ಆಕಾಂಕ್ಷಾ ಯೋಗ್ಯತಾ ಸಂನಿಧಿಶ್ಚ ವಾಕ್ಯಾರ್ಥಜ್ಞಾನೇ
ಹೇತುಃ। ಪದಸ್ಯ ಪದಾಂತರವ್ಯತಿರೇಕಪ್ರಯುಕ್ತಾನ್ವಯಾನನು
ಭಾವಕತ್ವಮಾಕಾಂಕ್ಷಾ। ಅರ್ಥಾಬಾಧೋ ಯೋಗ್ಯತಾ। ಪದಾನಾಮ
ವಿಲಂಬೇನೋಚ್ಚಾರಣಂ ಸಂನಿಧಿಃ। ತಥಾ ಚ ಆಕಾಂಕ್ಷಾದಿರಹಿತಂ
ವಾಕ್ಯಮಪ್ರಮಾಣಮ್। ಯಥಾ ಗೌರಶ್ವಃ ಪುರುಷೋ ಹಸ್ತೀತಿ
ನ ಪ್ರಮಾಣಮಾಕಾಂಕ್ಷಾವಿರಹಾತ್। ವಹ್ನಿನಾ ಸಿಂಚೇದಿತಿ ನ
ಪ್ರಮಾಣಂ ಯೋಗ್ಯತಾವಿರಹಾತ್। ಪ್ರಹರೇ ಪ್ರಹರೇऽಸಹೋ
ಚ್ಚಾರಿತಾನಿ ಗಾಮಾನಯೇತ್ಯಾದಿಪದಾನಿ ನ ಪ್ರಮಾಣಂ ಸಾಂನಿ
ಧ್ಯಾಭಾವಾತ್॥ —**

ಆಕಾಂಕ್ಷೆ, ಯೋಗ್ಯತಾ, ಸಂನಿಧಿ ಈ ಮೂರೂ ವಾಕ್ಯಾರ್ಥಜ್ಞಾ
ನಕ್ಕೆ ಕಾರಣವಾಗುತ್ತವೆ. ಆಕಾಂಕ್ಷೆಯಲಕ್ಷಣ ತೋರಿಸುತ್ತಾನೆ. "ಪದಸ್ಯ— "
ಒಂದು ಪದಕ್ಕೆ ಇನ್ನೊಂದು ಪದವಿಲ್ಲದಿರುವುದರಿಂದ ಅನ್ವಯಉಂಟಾಗದಿರು
ವುದು ಏನಿವೆಯೋ ಅದೇ ಆಕಾಂಕ್ಷೆ. "ಅವ್ಯವಹಿತೋತ್ತರತ್ವ ಸಂಬಂಧೇನ
ಯತ್ಪದೇಯತ್ಪದ ಪ್ರಕಾರಕ ಜ್ಞಾನವ್ಯತಿರೇಕ ಪ್ರಯುಕ್ತೋ ಯಾದೃಶಶಾಬ್ದ
ಬೋಧಾಭಾವಸ್ತಾದೃಶಶಾಬ್ದಬೋಧೇ ತತ್ಪದೇ ತತ್ಪದವತ್ತ್ವಮಾಕಾಂಕ್ಷಾ'
ಎಂದು ಪರಿಷ್ಕೃತ ಲಕ್ಷಣ. ಶಾಬ್ದಬೋಧದಲ್ಲಿ ಅವ್ಯವಹಿತೋತ್ತರತ್ವ ಸಂಬಂ
ಧದಿಂದ ಒಂದು ಪದದಲ್ಲಿ ಇನ್ನೊಂದು ಪದದಿಂದ ಕೂಡಿರುವುದು. ಒಂದು
ಪದವಾದಮೇಲೆ ಸಮೀಪದಲ್ಲಿಯೇ ಇನ್ನೊಂದು ಪದದಿಂದಕೂಡಿರುವುದು.
ಯಾವ ಪದದ ಸಮೀಪದಲ್ಲಿ ಯಾನ ಪದಜ್ಞಾನವಿಲ್ಲದಿದ್ದರೆ ಪ್ರಕೃತಕ್ಕೆ

ಬೇಕಾದ ಶಾಬ್ದಬೋಧವು ಬರುವುದಿಲ್ಲವೋ ಆ ಶಾಬ್ದಬೋಧದಲ್ಲಿ ಆ ಪದವು ಅವ್ಯವಹಿತ ಉತ್ತರತ್ವಸಂಬಂಧದಿಂದ ಆ ಪದದಿಂದಕೂಡಿರುವುದೇ ಆಕಾಂಕ್ಷೆ. ಘಟಮ್ ಎಂದಿದ್ದರೆ ಇಲ್ಲಿ ಎರಡು ಪದಗಳಿವೆ. ಘಟ÷ಅಮ್. ಇಲ್ಲಿ ಅಮ್ (ಕರ್ಮತ್ವವಾಚಕವಿಭಕ್ತಿ) ಪದವು ಅವ್ಯವಹಿತೋರತ್ವಸಂಬಂಧದಿಂದ ಘಟ ಪದದಿಂದ ಕೂಡಿರುತ್ತದೆ. ಅಮ್‌ಪದವಿಶೇಷ್ಯಕ ಘಟಪದ ಪ್ರಕಾರಕ ಜ್ಞಾನ ವಿರುವುದರಿಂದ ಘಟೀಯಂ ಕರ್ಮತ್ವಂ= ಘಟಸಂಬಂಧವಾದ ಕರ್ಮತ್ವ ಎಂಬ ಶಾಬ್ದಬೋಧ ಬರುತ್ತದೆ. ಪ್ರಕೃತಿ ಪ್ರತ್ಯಯಗಳಲ್ಲಿ ಪ್ರತ್ಯಯಾರ್ಥಕ್ಕೆ ಪ್ರಾಧಾನ್ಯವಿರುವುದರಿಂದ ಕರ್ಮತ್ವ ವಿಶೇಷ್ಯಕ ಬೋಧವುಂಟಾಗುತ್ತದೆ. ಅಮ್+ಘಟ ಎಂದು ಹೇಳಿದರೆ ತತ್ಪದಲ್ಲಿ ತತ್ಪದವತ್ವ ಬರುವುದಿಲ್ಲ. ಅಂದರೆ ಪ್ರಕೃತಶಾಬ್ದಬೋಧವು ಘಟಪದ ಪ್ರಕಾರಕ ಜ್ಞಾನವಿದ್ದರೇ ಬರುತ್ತದೆ ಅಮ್+ಘಟ ಎಂಬಲ್ಲಿ ಘಟಪದ ಪ್ರಕಾರಕ ಜ್ಞಾನವಿಲ್ಲದಿರುವುದರಿಂದ ಪ್ರಕೃತ ಶಾಬ್ದಬೋಧ ಬಾರದಿರುವುದರಿಂದ ಅಮ್‌ಪದದಲ್ಲಿ ಘಟಪದವೈಶಿಷ್ಟ್ಯ ಬರುವುದಿಲ್ಲ. ಶಾಬ್ದಬೋಧ ಬರಬೇಕಾದರೆ ಒಂದು ಪದವು ಇನ್ನೊಂದು ಪದವನ್ನು ನಿಯತವಾಗಿ ಅಪೇಕ್ಷಿಸುತ್ತಿರಬೇಕು. ಕರ್ಮಾದಿಕಾರಕ ಹೇಳಿದರೆ ನಿಯತವಾಗಿ ಕ್ರಿಯಾಕಾಂಕ್ಷೆಯೂ, ಕ್ರಿಯೆಯನ್ನು ಹೇಳಿದರೆ ನಿಯತವಾಗಿ ಕರ್ಮಾದಿಕಾರಕಾಕಾಂಕ್ಷೆಯೂ ಬರುತ್ತದೆ. ಈ ರೀತಿಯಾದ ಆಕಾಂಕ್ಷೆಯು ಶಾಬ್ದಬೋಧಕ್ಕೆ ಕಾರಣವಾಗುತ್ತವೆ. ಅರ್ಥಾಬಾಧವೇ ಯೋಗ್ಯತಾ ಆಗುತ್ತದೆ. ಬಾಧೆಯು ತೋರದಿರುವುದು ಯೋಗ್ಯತಾ. (ಭಾಧಾಭಾವ) 'ಅಗ್ನಿನಾ ಸಿಂಚೇತ್'= 'ಬೆಂಕಿಯಿಂದ ಚಿಮಿಕಿಸು' ಎಂಬಲ್ಲಿ ಸೇಚನ ಕ್ರಿಯೆಯಲ್ಲಿ ಕರಣತ್ವ ಬೆಂಕಿಗೆ ತೋರುವುದದಿಂದ ಅಲ್ಲಿ ಬಾಧ ನಿಶ್ಚಯವಿದೆ. ಬೆಂಕಿಯಿಂದ ಚಿಮಿಕಿಸಲು ಸಾಧ್ಯವಿಲ್ಲ. ಕರಣತ್ವ (ಸಾಧನತ್ವ) ಧರ್ಮವು ನೀರು ಮುಂತಾದವುಗಳಲ್ಲಿ ಸಂಭವಿಸುತ್ತದೆ. ಬೆಂಕಿಯಲ್ಲಿ ಬಾಧಿತವಾದುದರಿಂದ ಬಾಧಾಭಾವ ರೂಪ ಯೋಗ್ಯತಾ ಇಲ್ಲದಿರುವುದರಿಂದ ಆ ವಾಕ್ಯದಿಂದ ಶಾಬ್ದಬೋಧ ಬರುವುದಿಲ್ಲ. ಸಂನ್ನಿಧಿಲಕ್ಷಣ ಹೇಳುತ್ತಾನೆ.' ಪದಾನಾಂ— ' ವಿಲಂಬ ಮಾಡದೆ ಪದಗಳನ್ನು ಉಚ್ಚರಿಸುವುದೇ ಸಂನಿಧಿ. ಒಟ್ಟಿಗೆ ಉಚ್ಚರಿಸದೆ ಮಧ್ಯೆ ಬಿಟ್ಟು ಬಿಟ್ಟು ಉಚ್ಚರಿಸುವುದೇ ವಿಲಂಬೋಚ್ಚಾರಣ. ಪದಗಳನ್ನು ಎಡೆಬಿಡದೆ ಉಚ್ಚರಿಸುವುದೇ ಸಂನಿಧಿ. ಈ ಆಕಾಂಕ್ಷಾ, ಯೋಗ್ಯತಾ, ಸಂನಿಧಿ ಇಲ್ಲದಿರುವ

ವಾಕ್ಯವು ಅಪ್ರಮಾಣ. ಹಸು, ಕುದುರೆ, ಮನುಷ್ಯ, ಆನೆ ಎಂದು ಹೇಳಿದರೆ ಇಲ್ಲಿ ಆಕಾಂಕ್ಷಾ ಇಲ್ಲದಿರುವುದರಿಂದ ಪ್ರಮಾಣವಾಗುವುದಿಲ್ಲ. ಇದರಿಂದ ಶಾಬ್ದಬೋಧ ಬರುವುದಿಲ್ಲ. 'ಬೆಂಕಿಯಿಂದ ಚಿಮಿಕಿಸು' ಎಂಬ ವಾಕ್ಯವೂ ಅಪ್ರಮಾಣ. ಹಿಂದೆ ಹೇಳಿದಂತೆ ಯೋಗ್ಯತೆ ಇಲ್ಲದಿರುವುದರಿಂದ ಶಾಬ್ದಬೋಧವನ್ನು ಹುಟ್ಟಿಸುವುದಿಲ್ಲ. ಈಗ ಒಂದು ಪದಹೇಳಿ ಒಂದು ಜಾಮವಾದಮೇಲೆ ಆ ವಾಕ್ಯದ ಇನ್ನೊಂದು ಪದಹೇಳಿ ಹೀಗೇ ಜಾಮಾಜಾಮಕ್ಕೆ ಒಂದು ವಾಕ್ಯದ ಪದಗಳನ್ನುಚ್ಚರಿಸಿದರೆ ಸಾಂನಿಧ್ಯವಿಲ್ಲದಿರುವುದರಿಂದ ಶಾಬ್ದಬೋಧ ಬರುವುದಿಲ್ಲ. ಆದುದರಿಂದ ಅದು ಅಪ್ರಮಾಣ. ಒಂದು ವಾಕ್ಯದಲ್ಲಿ ಈ ಮೂರೂ ಇದ್ದರೆ ಆ ವಾಕ್ಯದಿಂದ ಬೋಧವುಂಟಾಗುತ್ತದೆ.

**ವಾಕ್ಯಂ ದ್ವಿವಿಧಮ್— ವೈದಿಕಂ ಲೌಕಿಕಂ ಚ॥ ವೈದಿಕಮೀಶ್ವರೋಕ್ತತ್ವಾತ್ಸರ್ವಮೇವ ಪ್ರಮಾಣಮ್। ಲೌಕಿಕಂ ತ್ವಾಪ್ತೋಕ್ತಂ ಪ್ರಮಾಣಮ್। ಅನ್ಯದಪ್ರಮಾಣಮ್॥**

ವೈದಿಕವಾಕ್ಯ, ಲೌಕಿಕವಾಕ್ಯವೆಂದು ವಾಕ್ಯ ಎರಡು ರೀತಿಯಾಗಿರುತ್ತದೆ. ವೈದಿಕವೆಂದರೆ ವೇದವಾಕ್ಯ. ವೇದವಾಕ್ಯಗಳೆಲ್ಲವೂ ಈಶ್ವರನಿಂದ ಹೇಳಲ್ಪಟ್ಟದ್ದರಿಂದ ಅವೆಲ್ಲವೂ ಪ್ರಮಾಣ. ವೇದ ಪದದಿಂದ ವೇದವಲ್ಲದೆ ವೇದಮೂಲಕವಾಗಿ ಹೊರಟಿರುವ ಸ್ಮೃತ್ಯಾದಿಗಳನ್ನೂ ತೆಗೆದುಕೊಳ್ಳಬೇಕು. ವೇದವಾಕ್ಯ ಭಿನ್ನವಾದದ್ದು ಲೌಕಿಕ ವಾಕ್ಯ. ಇವುಗಳಲ್ಲಿ ಆಪ್ತನು ಹೇಳಿರುವುದು ಮಾತ್ರ ಪ್ರಮಾಣ. ಉಳಿದದ್ದು ಅಪ್ರಮಾಣ. ಶಬ್ದವನ್ನು ಪ್ರಯೋಗಿಸಲು ಕಾರಣವಾದ ಯಥಾರ್ಥವಾದ ಜ್ಞಾನವುಳ್ಳವನೇ ಆಪ್ತನೆಂದು ಹಿಂದೆ ಹೇಳಿದೆ.

**ವಾಕ್ಯಾರ್ಥಜ್ಞಾನಂ ಶಾಬ್ದಜ್ಞಾನಮ್ । ತತ್ಕರಣಂ ಶಬ್ದಃ ॥**

**ಇತಿ ಶಬ್ದಪರಿಚ್ಛೇದಃ**

ವಾಕ್ಯಾರ್ಥವಿಷಯಕಜ್ಞಾನವೇ ಶಾಬ್ದಜ್ಞಾನವಾಗುತ್ತದೆ. ಇದೇ ಶಾಬ್ದಪ್ರಮಾತ್ಮಕಜ್ಞಾನ. ಈದಕ್ಕೆ ಕಾರಣವಾದದ್ದು ಶಬ್ದ. ಶಬ್ದದಿಂದ ಶಾಬ್ದಜ್ಞಾನ ಬರುತ್ತದೆ. ಶಬ್ದವು ಕರಣವಾಗುತ್ತದೆ.

**ಹೀಗೆ ಶಬ್ದಪ್ರಕರಣ ಮುಗಿದಿದೆ**

# ಸಂಶಯಾದಿನಿರೂಪಣ

**ಅಯಥಾರ್ಥಾನುಭವಸ್ತ್ರಿವಿಧಃ—ಸಂಶಯ ವಿಪರ್ಯಯತರ್ಕ ಭೇದಾತ್ । ಏಕಸ್ಮಿನ್ ಧರ್ಮಿಣಿ ವಿರುದ್ಧನಾನಾಧರ್ಮವೈಶಿಷ್ಟ್ಯಾವಗಾಹಿ ಜ್ಞಾನಂ ಸಂಶಯಃ । ಯಥಾ ಸ್ಥಾಣುರ್ವಾ ಪುರುಷೋ ವೇತಿ ॥**

ಯಥಾರ್ಥಾನುಭವವನ್ನು ವಿವರಿಸಿ ಈಗ ಅಯಥಾರ್ಥಾನುಭವವನ್ನು ವಿಭಾಗಿಸುತ್ತಾನೆ. ಸಂಶಯ, ವಿಪರ್ಯಯ, ತರ್ಕ ಎಂದು ಇದು ಮೂರು ವಿಧವಾಗಿರುತ್ತದೆ. 'ಏಕಸ್ಮಿನ್-- ' ಎಂಬುದರಿಂದ ಸಂಶಯ ಸ್ವರೂಪವನ್ನು ತೋರಿಸುತ್ತಾನೆ. ಒಂದು ಧರ್ಮಿಯಲ್ಲಿ ವಿರುದ್ಧವಾದ ನಾನಾಧರ್ಮವನ್ನು ಗ್ರಹಿಸುವ ಜ್ಞಾನವೇ ಸಂಶಯ. ಮೋಟುಮರವೋ ಅಥವಾ ಮನುಷ್ಯನೋ ಎಂಬ ಜ್ಞಾನ ಸಂಶಯ. ದೂರದಲ್ಲಿ ಒಂದು ಮೋಟುಮರವನ್ನು ನೋಡುತ್ತಾನೆ. ಆಗ ಯಾವ ಕರಚರಣಗಳೂ ತೋರುವುದಿಲ್ಲ. ಎದುರಿಗೆ ತೋರುವ ಪದಾರ್ಥವೊಂದು ಧರ್ಮಿ. ಅಲ್ಲಿ ಸ್ಥಾಣುತ್ವ ಒಂದು ಧರ್ಮವೂ ಪುರುಷತ್ವ ಒಂದು ಧರ್ಮವೂ ತೋರಿವೆ. ಇವು ಪರಸ್ಪರ ವಿರುದ್ಧಧರ್ಮಗಳು. ಸ್ಥಾಣುತ್ವ ಇದ್ದಲ್ಲಿ (ಮೋಟುಮರದಲ್ಲಿ) ಪುರುಷತ್ವ ಇಲ್ಲ. ಪುರುಷತ್ವಇದ್ದಲ್ಲಿ (ಮನುಷ್ಯನಲ್ಲಿ) ಸ್ಥಾಣುತ್ವ ಇಲ್ಲ. ಇವೆರಡರವೈಶಿಷ್ಟ್ಯಸಂಬಂಧ ಒಂದು ಪದಾರ್ಥದಲ್ಲಿ ತೋರುತ್ತದೆ. 'ಏಕಧರ್ಮಾವಚ್ಛಿನ್ನ ವಿಶೇಷ್ಯತಾ ನಿರೂಪಿತಭಾವಾಭಾವೋಭಯನಿಷ್ಠಪ್ರಕಾರತಾಕಜ್ಞಾನಂ ಸಂಶಯಃ' ಇದು ಪರಿಷ್ಕೃತಲಕ್ಷಣ. ಈ ಜ್ಞಾನದಲ್ಲಿ ವಿಶೇಷ್ಯ ಒಂದಾಗಿ, ಪ್ರಕಾರ (ವಿಶೇಷಣ) ಎರಡಾಗಿ ತೋರುತ್ತದೆ. ಮೋಟುಮರವಾಗಿರಬಹುದು ಅಥವಾ ಆಗದಿರಬಹುದು. ಹಾಗೆಯೇ ಪುರುಷನಾಗಿರಬಹುದು, ಆಗದಿರಬಹುದು ನಿಶ್ಚಯವಿಲ್ಲ. ಸ್ಥಾಣುತ್ವ, ಸ್ಥಾಣುತ್ವಾಭಾವ, ಪುರುಷತ್ವ, ಪುರುಷತ್ವಾಭಾವ ಕೋಟಿಕವಾಗಿರುವುದರಿಂದ (ಕೋಟಿ= ವಿಷಯ) ಭಾವ, ಅಭಾವಗಳೆರಡೂ ಪ್ರಕಾರವಾಗಿರುತ್ತವೆ. ಪ್ರಕಾರತಾ ಎರಡರಲ್ಲಿದೆ (ಉಭಯನಿಷ್ಠಾ) ಪ್ರಕಾರತೆಯನ್ನು ನಿರೂಪಿಸುವುದು (ನಿರೂಪಕವಾದದ್ದು) ಜ್ಞಾನ. ಆದುದರಿಂದ ಪ್ರಕಾರತಾಕವಾಗುತ್ತವೆ. ಪ್ರಕಾ

ರತಾ ನಿರೂಪಕವೆಂದರ್ಥ. ವಿಶೇಷ್ಯಮಾತ್ರ ಒಂದೇ ಧರ್ಮದಿಂದ ಕೂಡಿರು ತ್ತದೆ. ತೋರುವುದು ಎರಡು ಧರ್ಮ. ವಿಶೇಷ್ಯದಲ್ಲಿರುವ ವಿಶೇಷ್ಯತಾ ಏಕ ಧರ್ಮಾವಚ್ಛಿನ್ನವಾಗುತ್ತದೆ. (ಒಂದು ಧರ್ಮದಿಂದ ಕೂಡಿರುವುದು) ಏಕ ಧರ್ಮಾವಚ್ಛಿನ್ನವಿಶೇಷ್ಯತೆಯಿಂದ ನಿರೂಪಿತವಾದದ್ದು ಪ್ರಕಾರತಾ. ಅದು ಭಾವಾಭಾವಉಭಯನಿಷ್ಠಾ. ಭಾವದ್ವಯಕೋಟಿಕ ಸಂಶಯವನ್ನು ಕೆಲ ವರು ಅಂಗೀಕರಿಸುವುದಿಲ್ಲ. ಒಂದು ಧರ್ಮಿಯಲ್ಲಿ ಎರಡು ಭಾವಗಳು ಪ್ರಕಾರ ವಾಗಿರುವುದಿಲ್ಲವೆಂದು ಅವರಮತ. ಕೆಲವರು ಅದನ್ನು ಸ್ವೀಕರಿಸುತ್ತಾರೆ. ಹೀಗೆ ಎದುರಿಗಿರುವ ಒಂದು ವಸ್ತುವಿನಲ್ಲಿ ಎರಡು ಧರ್ಮಗಳ ಸಂಬಂಧ ತೋರುತ್ತಿದ್ದರೆ ಅದು ಸಂಶಯವಾಗುತ್ತದೆ.

**ಮಿಥ್ಯಾಜ್ಞಾನಂ ವಿಪರ್ಯಯಃ। ಯಥಾ ಶುಕ್ತೌ 'ರಜ ತಮ್' ಇತಿ॥**

ವಿಪರ್ಯಯರೂಪ ಅಯಥಾರ್ಥಾನುಭವದ ಲಕ್ಷಣ ಹೇಳುತ್ತಾನೆ. ಸುಳ್ಳಾದಜ್ಞಾನ= ಇಲ್ಲದಿರುವಜ್ಞಾನ ವಿಪರ್ಯಯಜ್ಞಾನವಾಗುತ್ತದೆ. ಇದೇ ಅಯಥಾರ್ಥಜ್ಞಾನ. 'ತದಭಾವವತಿ ತತ್ಪ್ರಕಾರಕನಿಶ್ಚಯಃ' ಎಂದು ಹಿಂದೆ ಹೇಳಿದೆ. ಇದನ್ನೇ ಭ್ರಮೆ ಎನ್ನುತ್ತಾರೆ. ಯಾವುದೋ ಒಂದು ಧರ್ಮವಿಲ್ಲದ ಒಂದು ವಸ್ತುವಿನಲ್ಲಿ ಆ ಧರ್ಮವಿದೆಯೆಂದು ತಿಳಿದಜ್ಞಾನ. ಶುಕ್ತಿಯನ್ನು ನೋಡಿ (ಬೆಳ್ಳಿ) ರಜತವೆಂದು ತಿಳಿದರೆ ಅದು ವಿಪರ್ಯಯವಾಗುತ್ತದೆ. ಇಲ್ಲಿ ಇದಂ ಪದಾರ್ಥ ಶುಕ್ತಿ. ಇಲ್ಲಿ ರಜತತ್ವಧರ್ಮವಿಲ್ಲ. ರಜತತ್ವಾಭಾವವು ಶುಕ್ತಿ ಯಲ್ಲಿದೆ. ರಜತತ್ವಾಭಾವವಿರುವ ಶುಕ್ತಿಯಲ್ಲಿ ರಜತತ್ವ ಪ್ರಕಾರವಾಗಿ ತೋರಿದೆ ಆದುದರಿಂದ ಭ್ರಮಾತ್ಮಕ ಜ್ಞಾನವಾಗುತ್ತದೆ.

**ವ್ಯಾಪ್ಯಾರೋಪೇಣ ವ್ಯಾಪಕಾರೋಪಸ್ತರ್ಕಃ । ಯಥಾ-ಯದಿವಹ್ನಿರ್ನಸ್ಯಾತ್ ತರ್ಹಿ ಧೂಮೋಽಪಿ ನ ಸ್ಯಾದಿತಿ॥**

ವ್ಯಾಪ್ಯದ ಆರೋಪದಿಂದ ಹುಟ್ಟಿದ ವ್ಯಾಪಕದ ಆರೋಪವು ತರ್ಕ ಜ್ಞಾನವಾಗುತ್ತದೆ. ಆರೋಪವೆಂದರೆ ಇಲ್ಲಿ ಭ್ರಮೆಯೆಂದರ್ಥ. ವ್ಯಾಪ್ಯವಿಷ ಯಕ ಭ್ರಮೆಯಿಂದ ವ್ಯಾಪಕವಿಷಯಕಭ್ರಮೆ ಹುಟ್ಟಿದರೆ ಅದು ತರ್ಕ

ವಾಗುತ್ತದೆ. ಒಬ್ಬನು ಅನುಮಾನ ಪ್ರಯೋಗ ಮಾಡಿದಾಗ (ಪರ್ವತೋ ವಹ್ನಿಮಾನ್– ಧೂಮಾತ್= ಪರ್ವತದಲ್ಲಿ ಬೆಂಕಿ ಇದೆ. ಧೂಮದಿಂದ) ಇನ್ನೊಬ್ಬನು ಅಪ್ರಯೋಜಕತ್ವಶಂಕೆ ಮಾಡುತ್ತಾನೆ. ಪ್ರಕೃತ ಹೇತುವಿಗೆ ಸಾಧ್ಯ ಸಾಧನಮಾಡುವ ಸಾಮರ್ಥ್ಯ ಇಲ್ಲವೆಂದು ಆಪಾದಿಸುವುದು ಅಪ್ರಯೋಜಕತ್ವ ಶಂಕಾ. ಪರ್ವತದಲ್ಲಿ ಧೂಮವಿರಲಿ. ಬೆಂಕಿಮಾತ್ರ ಬೇಡ ಎಂದು ಆಪಾದಿಸುತ್ತಾನೆ. ಆಗ ಬೆಂಕಿ ಇದೆಯೆಂದು ಸಾಧಿಸಲು ಧೂಮಕ್ಕೆ ಸಾಮರ್ಥ್ಯ ಇಲ್ಲವೆಂದು ತಿಳಿಯುತ್ತದೆ. ಈ ಅಪ್ರಯೋಜಕತ್ವ ಶಂಕೆಯನ್ನು ಹೋಗಲಾಡಿಸಲು ತರ್ಕವನ್ನು ಉಪಯೋಗಿಸುತ್ತಾರೆ. 'ಯದಿ ವಹ್ನಿರ್ನಸ್ಯಾತ್ ತರ್ಹಿ ಧೂಮೋऽಪಿ ನ ಸ್ಯಾತ್' 'ಬೆಂಕಿ ಇಲ್ಲದಿದ್ದರೆ ಧೂಮವೂ ಇರಲಾರದು' ಎಂದು ಕಾರ್ಯಕಾರಣ ಭಂಗಕ್ಕೆ ಅನುಕೂಲವಾದ ತರ್ಕವನ್ನು ಹೇಳಿದರೆ ಧೂಮಕ್ಕೆ ವಹ್ನಿಸಾಧನತ್ವವು ಸಿದ್ಧವಾಗುತ್ತದೆ. ವ್ಯಾಪ್ಯವಿಷಯಕಭ್ರಮ= ಆರೋಪ= 'ಯದಿ ವಹ್ನ್ಯಭಾವವಾನ್ ಸ್ಯಾತ್' ವಹ್ನಿ ಇಲ್ಲದಿರುವುದಾದರೆ ಎಂಬ ಭ್ರಮ. ಆದರಿಂದ ವ್ಯಾಪಕವಿಷಯಕಭ್ರಮ ಹುಟ್ಟುತ್ತದೆ. 'ಧೂಮಾಭಾವವಾನ್ ಸ್ಯಾತ್' ಧೂಮಾಭಾವವುಳ್ಳದ್ದಾಗುತ್ತದೆ. ಧೂಮವೂ ಇಲ್ಲದೇ ಇರಬೇಕಾಗುತ್ತದೆ, ಎಂಬುವೇ ವ್ಯಾಪಕವಿಷಯಕ ಭ್ರಮ. ವಹ್ನ್ಯಭಾವವು ವ್ಯಾಪ್ಯ. ಧೂಮಾಭಾವವು ವ್ಯಾಪಕ. ಈ ತರ್ಕ ಹುಟ್ಟಬೇಕಾದರೆ ವ್ಯಾಪ್ಯ ವ್ಯಾಪಕಗಳ ಬಾಧನಿಶ್ಚಯ ಇರಬೇಕು. ತರ್ಕಕ್ಕೆ ಬಾಧನಿಶ್ಚಯವೇ ಕಾರಣ. ಬಾಧನಿಶ್ಚಯವಿಲ್ಲದಿದ್ದರೆ ಅಪ್ರಯೋಜಕತ್ವ ಶಂಕೆ ಮಾಡಿದಾಗ ಇಷ್ಟಾಪತ್ತಿ ಎನ್ನಬಹುದು. ಆಗಲಿ ಎನ್ನುವುದಾದರೆ ಅಸಾಮರ್ಥ್ಯ ಒಪ್ಪಿಕೊಂಡಂತಾಗುತ್ತದೆ. ಬಾಧ ನಿಶ್ಚಯವಿದ್ದರೆ ತರ್ಕ ಬಂದು ಆದರಿಂದ ಅಪ್ರಯೋಜಕತ್ವಶಂಕೆ ಹೋಗುತ್ತತೆ.

**ಸ್ಮೃತಿರಪಿ ದ್ವಿವಿಧಾ– ಯಥಾರ್ಥಾ ಅಯಥಾರ್ಥಾ ಚ। ಪ್ರಮಾಜನ್ಯಾ ಯಥಾರ್ಥಾ। ಅಪ್ರಮಾಜನ್ಯಾ ಅಯಥಾರ್ಥಾ॥**

ಸಂಸ್ಕಾರದಿಂದ ಹುಟ್ಟಿದ ಜ್ಞಾನವು ಸ್ಮೃತಿಯೆಂದು ಹಿಂದೆ ಹೇಳಿದೆ. ಅದೂ ಕೂಡಾ ಯಥಾರ್ಥಸ್ಮೃತಿ, ಅಯಥಾರ್ಥಸ್ಮೃತಿಯೆಂದು ಎರಡು ವಿಧವಾಗಿದೆ. ಪ್ರಮಾಜನ್ಯಾ ಅಂದರೆ ಯಥಾರ್ಥ ಅನುಭವದಿಂದ ಹುಟ್ಟಿದ

ಸ್ಮೃತಿ ಯಥಾರ್ಥವಾಗುತ್ತದೆ. ಅಪ್ರಮಾಜನ್ಯಾ ಅಂದರೆ ಅಯಥಾರ್ಥಾನು ಭವದಿಂದ ಹುಟ್ಟಿದ ಸ್ಮೃತಿ ಅಯಥಾರ್ಥವಾಗುತ್ತದೆ.

**ಸರ್ವೇಷಾಮನುಕೂಲವೇದನೀಯಂ ಸುಖಮ್॥**

ಎಲ್ಲರಲ್ಲಿಯೂ ಸಮವೇತವಾದ ಅಂದರೆ ಸಮವಾಯ ಸಂಬಂಧದಿಂದ ಇರುವ ಅನುಕೂಲತ್ವ ಪ್ರಕಾರಕ ಜ್ಞಾನದಲ್ಲಿ ವಿಷಯವಾಗಿರುವುದು ಸುಖ. ಸುಖಂ ಮದನುಕೂಲಂ= ಸುಖವು ನನಗೆ ಅನುಕೂಲವಾದದ್ದು ಎಂಬ ಜ್ಞಾನ ದಲ್ಲಿ ಸುಖವು ವಿಷಯವಾಗಿದೆ. ಸುಖವು ಅನುಕೂಲ ಎಂಬಲ್ಲಿ ಅನುಕೂಲತ್ವ ಪ್ರಕಾರವಾಗಿದೆ. ಅನುಕೂಲತ್ವದಲ್ಲಿರುವ ಪ್ರಕಾರತಾ ನಿರೂಪಕವು ಜ್ಞಾನವಾ ಗುತ್ತದೆ. ಈ ಜ್ಞಾನವು ಎಲ್ಲರಲ್ಲಿಯೂ ಸಮವಾಯ ಸಂಬಂಧದಿಂದ ಇರುವುದ ರಿಂದ ಸಮವೇತವಾಗುತ್ತದೆ. 'ಇತರೇಚ್ಛಾನಧೀನೇಚ್ಛಾವಿಷಯತ್ವಂ' ಎಂದು ಸುಖದ ನಿಷ್ಕೃಷ್ಟಲಕ್ಷಣ. ಒಂದು ಇಚ್ಛೆಗೆ ಒಳಗಾಗದ ಇಚ್ಛೆಯಲ್ಲಿ ವಿಷಯ ವಾಗಿ ತೋರುವುದು ಸುಖ. ಕೇವಲ ಇಚ್ಛೆಯಲ್ಲಿ ವಿಷಯ ಎಂದರೆ ಭೋಜ ನಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಭೋಜನವೂ ಇಚ್ಛಾವಿಷಯವಾಗಿರು ತ್ತದೆ. ಇತರೇಚ್ಛಾನಧೀನೇಚ್ಛಾವಿಷಯ ಎಂದರೆ ಭೋಜನವು ಇತರೇಚ್ಛಾ ಅಧೀನ ಇಚ್ಛಾವಿಷಯವಾಗುವುದರಿಂದ ಅಲ್ಲಿ ಲಕ್ಷಣ ಬರುವುದಿಲ್ಲ. ಕೇವಲ ಅನುಕೂಲವೇದನೀಯ ಅಂದರೆ ಘಟವು ಅನುಕೂಲವಾಗಿದೆ ಎಂಬ ಜ್ಞಾನ ಬರುವುದರಿಂದ ಅನುಕೂಲತ್ವಪ್ರಕಾರಕಜ್ಞಾನವಿಷಯತ್ವವು ಘಟದಲ್ಲಿ ಬರು ವುದರಿಂದ ಅತಿವ್ಯಾಪ್ತಿ ಬರುತ್ತದೆ. ಸರ್ವೇಷಾಂ ಎಂಬುದರಿಂದ ಎಲ್ಲರಿಗೂ ಘಟವೂ ಅನುಕೂಲ ಎಂಬ ಜ್ಞಾನ ಬಾರದಿರುವುದರಿಂದ ಅತಿವ್ಯಾಪ್ತಿ ಬರು ವುದಿಲ್ಲ. ಇತರೇಚ್ಛಾನಧೀನ ಇಚ್ಛಾವಿಷಯತ್ವವೂ ಅದರಲ್ಲಿ ಬರುವುದಿಲ್ಲ.

**ಪ್ರತಿಕೂಲವೇದನೀಯಂ ದುಃಖಮ್॥**

ಪ್ರತಿಕೂಲತ್ವ ಪ್ರಕಾರಕ ಜ್ಞಾನವಿಷಯವಾದದ್ದು ದುಃಖ. ದುಃಖಂ ಪ್ರತಿಕೂಲಮ್ ಎಂಬ ಜ್ಞಾನದಲ್ಲಿ ಪ್ರತಿಕೂಲತ್ವ ಪ್ರಕಾರವಾಗಿಯೂ ದುಃಖವು ವಿಷಯವಾಗಿಯೂ ಇರುತ್ತದೆ. ಇಲ್ಲಿಯೂ "ಇತರದ್ವೇಷ ಅನಧೀನ ದ್ವೇಷ ವಿಷಯತ್ವಂ" ಎಂದು ನಿಷ್ಕೃಷ್ಟಲಕ್ಷಣ ಹೇಳಬೇಕು. ಕೇವಲ ದ್ವೇಷವಿಷ

ಯತ್ವಂ ಎಂದರೆ ಸರ್ಪವೂ ದ್ವೇಷವಿಷಯವಾದುದರಿಂದ ಅಲ್ಲಿ ಅತಿವ್ಯಾಪ್ತಿ ಬರುತ್ತದೆ. ಇತರದ್ವೇಷಾನಧೀನತ್ವವನ್ನು ದ್ವೇಷದಲ್ಲಿ ಹೇಳಿದರೆ ಸರ್ಪದ ವಿಷದಿಂದ ಹುಟ್ಟಿದ ದುಃಖದದ್ವೇಷದಿಂದ ಸರ್ಪದ್ವೇಷವುಂಟಾಗುವುದರಿಂದ ಇತರದ್ವೇಷಾನಧೀನತ್ವ ದ್ವೇಷದಲ್ಲಿ ಬಾರದಿರುವುದರಿಂದ ಅತಿವ್ಯಾಪ್ತಿ ಬರುವುದಿಲ್ಲ. ಹೀಗೆಯೇ ಫಲದ ಇಚ್ಛೆಯು ಉಪಾಯೇಚ್ಛೆಯನ್ನು ಕುರಿತು ಕಾರಣವಾಗಿರುವುದರಿಂದ ಫಲೇಚ್ಛೆ ಇದ್ದರೆ ಆದರ ಉಪಾಯೇಚ್ಛೆಯುಂಟಾಗುತ್ತದೆ. ಫಲದಲ್ಲಿ ದ್ವೇಷ ಇದ್ದರೆ ಅದರ ಉಪಾಯದಲ್ಲಿಯೂ ದ್ವೇಷ ಬರುತ್ತದೆ.

**ಇಚ್ಛಾ ಕಾಮಃ। ಕ್ರೋಧೋ ದ್ವೇಷಃ। ಕೃತಿಃ ಪ್ರಯತ್ನಃ॥**

ಇಚ್ಛೆಯೇ ಕಾಮ. ಇಚ್ಛಾತ್ವಜಾತಿಯಿಂದ ಕೂಡಿರುತ್ತದೆ. ಇದುಎರಡು ವಿಧ. ಫಲೇಚ್ಛಾ, ಉಪಾಯೇಚ್ಛಾ. ಸುಖವು ಫಲೇಚ್ಛೆಯೂ. ಯಾಗಾದಿಗಳು ಉಪಾಯೇಚ್ಛೆಯೂ ಆಗುತ್ತದೆ. ದ್ವೇಷತ್ವ ಜಾತಿಯಿಂದ ಕೂಡಿರುವುದು ದ್ವೇಷ. ಪ್ರಯತ್ನತ್ವ ಜಾತಿಯಿಂದ ಕೂಡಿರುವುದು ಪ್ರಯತ್ನ. ಕ್ರೋಧ ಕೃತಿ ದ್ವೇಷ ಪ್ರಯತ್ನಗಳ ಪರ್ಯಾಯಪದಗಳು. ಪ್ರಯತ್ನವು ಪ್ರವೃತ್ತಿ, ನಿವೃತ್ತಿ, ಜೀವನಯೋನಿಯೆಂದು ಮೂರುವಿಧವಾಗಿದೆ. ಇಚ್ಛೆಯಿಂದ ಹುಟ್ಟಿದರೆ ಪ್ರವೃತ್ತಿಯಾಗುತ್ತದೆ. ದ್ವೇಷದಿಂದ ಹುಟ್ಟಿದರೆ ನಿವೃತ್ತಿಯಾಗುತ್ತದೆ. ಪ್ರಾಣಸಂಚಾರಕ್ಕೆ ಕಾರಣವಾದದ್ದು ಜೀವನಯೋನಿಪ್ರಯತ್ನ. ಜೀವನಾದೃಷ್ಟದಿಂದ ಇದು ಹುಟ್ಟುತ್ತದೆ.

**ವಿಹಿತಕರ್ಮಜನ್ಯೋ ಧರ್ಮಃ। ನಿಷಿದ್ಧಕರ್ಮಜನ್ಯಸ್ತ್ವಧರ್ಮಃ॥**

ಧರ್ಮಾಧರ್ಮಲಕ್ಷಣ ಹೇಳುತ್ತಾನೆ. ವೇದಾದಿಗಳಿಂದ ವಿಧಿಸಲ್ಪಟ್ಟ ಕರ್ಮದಿಂದ ಉಂಟಾದದ್ದು ಧರ್ಮ. ವೇದನಿಷಿದ್ಧವಾದ ಕರ್ಮದಿಂದ ಹುಟ್ಟುವುದು ಅಧರ್ಮ. ಇವು ಪುಣ್ಯಾಪುಣ್ಯಗಳಾಗುತ್ತವೆ.

**ಬುದ್ಧ್ಯಾದಯೋಽಷ್ಟಾವಾತ್ಮಮಾತ್ರವಿಶೇಷಗುಣಾಃ। ಬುದ್ಧೀಚ್ಛಾಪ್ರಯತ್ನಾ ನಿತ್ಯಾ ಅನಿತ್ಯಾಶ್ಚ। ನಿತ್ಯಾ ಈಶ್ವರಸ್ಯ। ಅನಿತ್ಯಾ ಜೀವಸ್ಯ॥**

ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ ಅಧರ್ಮ. ಈ ಎಂಟು ಕೇವಲ ಆತ್ಮನಲ್ಲಿ ಮಾತ್ರ ಇರತಕ್ಕ ವಿಶೇಷಗುಣಗಳು. ಇವುಗಳಲ್ಲಿ ಬುದ್ಧಿ, ಇಚ್ಛಾ, ಪ್ರಯತ್ನಗಳು ನಿತ್ಯವೂ ಅನಿತ್ಯವೂ ಆಗಿರುವುದರಿಂದ ಎರಡು ವಿಧವಾಗಿವೆ. ಈಶ್ವರನ ಬುದ್ಧೀಚ್ಛಾಪ್ರಯತ್ನಗಳು ನಿತ್ಯವಾಗಿರುತ್ತವೆ. ಜೀವನಲ್ಲಿರುವವುಗಳು ಅನಿತ್ಯವಾಗಿರುತ್ತವೆ.

**ಸಂಸ್ಕಾರಸ್ತ್ರಿವಿಧಃ– ವೇಗೋ ಭಾವನಾ ಸ್ಥಿತಿಸ್ಥಾಪಕಶ್ಚೇತಿ। ವೇಗಃ ಪೃಥಿವ್ಯಾದಿಚತುಷ್ಟಯಮನೋವೃತ್ತಿಃ । ಅನುಭವ ಜನ್ಯಾ ಸ್ಮೃತಿಹೇತುರ್ಭಾವನಾ ಆತ್ಮಮಾತ್ರವೃತ್ತಿಃ । ಅನ್ಯಥಾ ಕೃತಸ್ಯ ಪುನಸ್ತದವಸ್ಥಾಪಾದಕಃ ಸ್ಥಿತಿಸ್ಥಾಪಕಃ ಕಟಾದಿ ಪೃಥಿವೀ ವೃತ್ತಿಃ ॥ಇತಿ ಗುಣಾಃ।**

ವೇಗ, ಭಾವನಾ, ಸ್ಥಿತಿಸ್ಥಾಪಕವೆಂದು ಸಂಸ್ಕಾರವು ಮೂರುವಿಧವಾಗಿವೆ. ಇವುಗಳಲ್ಲಿ ವೇಗವು ಪೃಥಿವೀ, ಅಪ್, ತೇಜೋವಾಯುಗಳಲ್ಲಿಯೂ, ಮನಸ್ಸಿನಲ್ಲಿಯೂ ಇರುತ್ತದೆ. ಅನುಭವದಿಂದ ಹುಟ್ಟಿ ಸ್ಮೃತಿಗೆ ಕಾರಣವಾಗಿರುವುದು ಭಾವನಾ. ಇದು ಕೇವಲ ಆತ್ಮನಲ್ಲಿ ಮಾತ್ರವಿರುತ್ತದೆ. ಯಾವುದೋ ರೀತಿಯಾಗಿರುವುದಕ್ಕೆ = ಪೂರ್ವಾವಸ್ಥೆಗಿಂತ ಬೇರೆಯಾದ ಅವಸ್ಥೆಯನ್ನು ಹೊಂದಿರುವುದಕ್ಕೆ ಪುನಃ ಅದೇ ಅವಸ್ಥೆಯನ್ನು ಅಂದರೆ ಪೂರ್ವಾವಸ್ಥೆಯನ್ನು ತಂದುಕೊಡುವುದು ಸ್ಥಿತಿಸ್ಥಾಪಕವಾಗುತ್ತದೆ. ಇದು ಚಾಪೆ ಮುಂತಾದ ಪೃಥಿವಿಯಲ್ಲಿ ಮಾತ್ರ ಇರುತ್ತದೆ.

"ಅನುಭವಜನ್ಯತ್ವೇ ಸತಿ ಸ್ಮೃತಿಹೇತುತ್ವಂ" ಎಂಬುದು ಭಾವನಾ ಲಕ್ಷಣ. ಕೇವಲ ಸ್ಮೃತಿಹೇತು (ಅಂದರೆ ಸ್ಮೃತಿಗೆ ಕಾರಣ) ಎಂದರೆ ಆತ್ಮಮನಃ ಸಂಯೋಗದಲ್ಲಿ ಅತಿವ್ಯಾಪ್ತಿ ಬರುತ್ತದೆ. ಜ್ಞಾನಸಾಮಾನ್ಯಕ್ಕೆ ಆತ್ಮಮನಃ ಸಂಯೋಗ ಅಸಮವಾಯಿಕಾರಣವಾಗಿದೆ. ಆಗ ಸ್ಮೃತಿರೂಪಜ್ಞಾನಕ್ಕೂ ಕಾರಣವಾದುದರಿಂದ ಸ್ಮೃತಿಹೇತುತ್ವ ಅಲ್ಲಿ ಬರುತ್ತದೆ. ಅನುಭವಜನ್ಯವೆಂದರೆ ಆತ್ಮಮನಃಸಂಯೋಗವು ಅನುಭವದಿಂದ ಹುಟ್ಟದಿರುವುದರಿಂದ ಅತಿವ್ಯಾಪ್ತಿ ಬರುವುದಿಲ್ಲ. ಕೇವಲ ಅನುಭವಜನ್ಯತ್ವಂ ಅಂದರೆ ಅನುಭವದ ಧ್ವಂಸವೂ ಅನುಭವದಿಂದ ಹುಟ್ಟುವುದರಿಂದ ಧ್ವಂಸದಲ್ಲಿ ಅತಿವ್ಯಾಪ್ತಿ ಬರು

ತ್ತದೆ. ಆದುದರಿಂದ ಸ್ಮೃತಿಹೇತುತ್ವಂ ಎಂದಿದೆ. ಅನುಭವಧ್ವಂಸವು ಅನು ಭವದಿಂದ ಹುಟ್ಟಿದರೂ ಸ್ಮೃತಿಗೆ ಕಾರಣವಾಗದಿರುವುದರಿಂದ ಅತಿವ್ಯಾಪ್ತಿ ಬರುವುದಿಲ್ಲ.

ಹೀಗೆ ಹೇಳಿದರೂ "ದಂಡೀ ಪುರುಷಃ" ಎಂಬ ಪ್ರತ್ಯಕ್ಷದಲ್ಲಿ ಅತಿವ್ಯಾಪ್ತಿ ಬರುತ್ತದೆ. ವಿಶಿಷ್ಟ ಬುದ್ಧಿಯನ್ನು ಕುರಿತು ವಿಶೇಷಣಜ್ಞಾನ ಕಾರಣವೆಂದು ಎಲ್ಲಾ ಶಾಸ್ತ್ರಕಾರರು ಒಪ್ಪಿರುತ್ತಾರೆ. ದಂಡದಿಂದ ಕೂಡಿದ ಮನುಷ್ಯ, ದಂಡ ವುಳ್ಳ ಮನುಷ್ಯ ಎಂಬ ವಿಶಿಷ್ಟಜ್ಞಾನ ಬರಬೇಕಾದರೆ ಮೊದಲು ದಂಡಜ್ಞಾನ ವಿರಬೇಕು. ದಂಡವಿಶಿಷ್ಟ ಬುದ್ಧಿಯೆಂದರೆ ದಂಡಪ್ರಕಾರಕ ಬುದ್ಧಿ. ದಂಡವು ವಿಶೇಷಣವಾಗಿ ತೋರಿರುವ ಬುದ್ಧಿಯೆಂದರ್ಥ. "ದಂಡೀ ಪುರುಷಃ" "ದಂಡ ವುಳ್ಳ ಮನುಷ್ಯ" ಇದು ವಿಶಿಷ್ಟಬುದ್ಧಿ. ದಂಡವನ್ನು ತಿಳಿಯದವನಿಗೆ 'ದಂಡ ವುಳ್ಳ ಮನುಷ್ಯ' ಎಂಬ ಜ್ಞಾನ ಬರುವುದಿಲ್ಲ. ಹೀಗೆ ಎಲ್ಲಿ "ಇದು ದಂಡ" ಎಂಬ ಪ್ರತ್ಯಕ್ಷ ಮೊದಲು ಬಂದು ಆಮೇಲೆ "ದಂಡವುಳ್ಳ ಪುರುಷ" ಎಂಬ ಪ್ರತ್ಯಕ್ಷವು ಹುಟ್ಟುತ್ತದೆಯೋ ಅಲ್ಲಿ "ದಂಡವುಳ್ಳ ಪ್ರತ್ಯಕ್ಷ" ಎಂಬ ಪ್ರತ್ಯಕ್ಷದಲ್ಲಿ ಭಾವನಾಸಂಸ್ಕಾರದ ಲಕ್ಷಣ ಬರುವುದರಿಂದ ಅತಿವ್ಯಾಪ್ತಿ ಬರುತ್ತದೆ. ಇದು ಮೊದಲು ಉಂಟಾದ ದಂಡ ಜ್ಞಾನರೂಪ ಅನುಭವದಿಂದ ಹುಟ್ಟುವುದರಿಂದ ಅನುಭವಜನ್ಯತ್ವ ಅಲ್ಲಿ ಬರುತ್ತದೆ. ಮುಂದೆ ಆಗುವ "ದಂಡವುಳ್ಳಪುರುಷ" ಎಂಬ ಸ್ಮೃತಿಗೆ ಕಾರಣವೂ ಆಗುವುದರಿಂದ ಸ್ಮೃತಿಹೇತುತ್ವವೂ ಬರುತ್ತದೆ. ಹೀಗೆ ಅತಿವ್ಯಾಪ್ತಿ ಬಂದರೆ ಆಗ ಅನುಭವಜನ್ಯತ್ವಂ ಎಂಬುದಕ್ಕೆ ಪರಿಷ್ಕಾರ ಮಾಡಬೇಕು. "ಅನುಭವತ್ವಾವಚ್ಛಿನ್ನ ಕಾರಣತಾನಿರೂಪಿತ ಕಾರ್ಯತಾಶ್ರ ಯತ್ವಂ" ಅನುಭವಜನ್ಯತ್ವಂ. ಅನುಭವ ಕಾರಣವಾದರೆ ಕಾರಣತಾ ಅನು ಭವದಲ್ಲಿದೆ. ಅಲ್ಲಿ ಅನುಭವತ್ವ ಅವಚ್ಛೇದಕ. ಅನುಭವತ್ವಾವಚ್ಛಿನ್ನವಾದದ್ದು ಕಾರಣತಾ. ಅದರಿಂದ ನಿರೂಪಿಸಲ್ಪಟ್ಟ ಕಾರ್ಯತಾ ಉಳ್ಳದ್ದು ಭಾವನಾ ಆಗುತ್ತದೆ. "ದಂಡೀ ಪುರುಷಃ" ಎಂಬ ಪ್ರತ್ಯಕ್ಷದಲ್ಲಿ ದಂಡಜ್ಞಾನರೂಪ ಅನು ಭವ ಕಾರಣ. ಕಾರಣತಾ ಅಲ್ಲಿದೆ. ಅಲ್ಲಿ ದಂಡಾನುಭವತ್ವವು ಅವಚ್ಛೇದಕ ವಾಗುವುದಿಲ್ಲ. ದಂಡಜ್ಞಾನರೂಪ ಅನುಭವದಿಂದ ದಂಡಪ್ರಕಾರಕ ಬುದ್ಧಿಯು (ದಂಡೀ ಪುರುಷಃ) ಹುಟ್ಟಿದಂತೆ ದಂಡಸ್ಮೃತಿಯಿಂದಲೂ ಹುಟ್ಟುತ್ತದೆ. ಆಗ ಎರಡು ಕಾರಣವಾಗುತ್ತದೆ. ಎರಡಕ್ಕೂ ಅನುಗುಣವಾಗಿ ದಂಡಜ್ಞಾನತ್ವ

ರೂಪದಿಂದ ದಂಡಜ್ಞಾನ ಕಾರಣವೆನ್ನಬೇಕು. ದಂಡಜ್ಞಾನತ್ವವು ದಂಡಾನು ಭವ, ದಂಡಸ್ಮೃತಿ ಎರಡರಲ್ಲಿಯೂ ಬರುತ್ತದೆ. ಕಾರಣತೆಯು ದಂಡಜ್ಞಾನ ತ್ವಾವಚ್ಛಿನ್ನವಾಗುತ್ತದೆ. ಆಗ ಅನುಭವತ್ವಾವಚ್ಛಿನ್ನ ಕಾರಣತಾ ನಿರೂಪಿತ ಕಾರ್ಯತಾಶ್ರಯತ್ವವು 'ದಂಡೀ ಪುರುಷಃ' ಎಂಬ ಪ್ರತ್ಯಕ್ಷದಲ್ಲಿ ಬರುವುದಿಲ್ಲ. ಆದುದರಿಂದ ಅತಿವ್ಯಾಪ್ತಿಗೆ ಅವಕಾಶವಿಲ್ಲ. ಭಾವನೆಯಲ್ಲಿ ಈ ರೀತಿಯ ಕಾರ್ಯತಾಶ್ರಯತ್ವ ಬರುತ್ತದೆ. ಕೇವಲ ಅನುಭವದಿಂದಲೇ ಭಾವನಾರೂಪ ಸಂಸ್ಕಾರ ಹುಟ್ಟುವುದರಿಂದ ಅನುಭವನಿಷ್ಠ (ಅನುಭವದಲ್ಲಿರುವ) ಕಾರಣತೆ ಯಲ್ಲಿ ಅನುಭವತ್ವವೇ ಅವಚ್ಛೇದಕವಾಗಿರುತ್ತದೆ. ಭಾವನಾತ್ವಾವಚ್ಛಿನ್ನ ಕಾರ್ಯತೆಯಿಂದ ನಿರೂಪಿಸಲ್ಪಟ್ಟ ಕಾರಣತೆಯಲ್ಲಿ ಅನುಭವತ್ವವು ಅವಚ್ಛೇ ದಕ. ಅನುಭವತ್ವಾವಚ್ಛಿನ್ನ ಕಾರಣತಾ ನಿರೂಪಿತ ಕಾರ್ಯತಾಶ್ರಯತ್ವವು (ಕಾರ್ಯತೆಗೆ ಆಶ್ರಯ ಭಾವನಾ) ಭಾವನೆಯಲ್ಲಿ ಬರುತ್ತದೆ. ಅನುಭವತ್ವಕ್ಕೆ ಅವಚ್ಛೇದಕತ್ವವನ್ನು ಹೇಳಿ ಅದರಿಂದ ಅವಚ್ಛಿನ್ನವಾದದ್ದು ಕಾರಣತಾ ಎಂದ ಮೇಲೆ 'ಸ್ಮೃತಿಹೇತುತ್ವಂ' ಎಂಬ ಎರಡನೆಯ ದಳಕ್ಕೆ ಪ್ರಯೋಜನವೇನು? ಅನುಭವಧ್ವಂಸದಲ್ಲಿ ಅತಿವ್ಯಾಪ್ತಿವಾರಣೆಮಾಡಲು ಅದನ್ನು ಹೇಳಿದ್ದರೂ ಈಗ ಹೇಳಬೇಕಾಗಿಲ್ಲ. ಅನುಭವಧ್ವಂಸವು ಅನುಭವ ಜನ್ಯವಾದರೂ ಅನು ಭವದಲ್ಲಿರುವ ಕಾರಣತಾ ಅನುಭವತ್ವಾವಚ್ಛಿನ್ನವಾಗುವುದಿಲ್ಲ. ಧ್ವಂಸವನ್ನು ಕುರಿತು ಪ್ರತಿಯೋಗಿ ಕಾರಣವಷ್ಟೆ. ಅನುಭವವು ಪ್ರತಿಯೋಗಿತ್ವ ರೂಪದಿಂದ (ಪ್ರತಿಯೋಗಿತ್ವವೇ ಅವಚ್ಛೇದಕ) ಅದರ ಧ್ವಂಸವನ್ನು ಕುರಿತು ಕಾರಣವಾ ಗುತ್ತದೆ. ಅನುಭವತ್ವರೂಪದಿಂದ ಕಾರಣವಾಗುವುದಿಲ್ಲ. ಆಗ ಪ್ರತಿಯೋಗಿ ತ್ವಾವಚ್ಛಿನ್ನಕಾರಣತಾ ನಿರೂಪಿತ ಕಾರ್ಯತಾಶ್ರಯತ್ವವು ಧ್ವಂಸದಲ್ಲಿ ಬರು ತ್ತದೆ. ಅನುಭವತ್ವಾವಚ್ಛಿನ್ನ ಕಾರಣತಾ ನಿರೂಪಿತ ಕಾರ್ಯತಾಶ್ರಯತ್ವ ರೂಪ ಲಕ್ಷಣ ಬರುವುದಿಲ್ಲ. ಆದುದರಿಂದ ವ್ಯರ್ಥವಲ್ಲವೇ? ಅಂದರೆ ಸ್ಮೃತಿ ಯಲ್ಲೇ ಅತಿವ್ಯಾಪ್ತಿ ಬರುವುದರಿಂದ ಸ್ಮೃತಿಹೇತುತ್ವಂ ಎಂದು ಹೇಳಲೇ ಬೇಕು. ಸ್ಮೃತಿಯನ್ನು ಕುರಿತು ಅನುಭವವು ಕಾರಣ. ಅನುಭತ್ವ ರೂಪ ದಿಂದಲೇ ಕಾರಣವಾಗುವುದರಿಂದ ಕಾರಣತೆಯಲ್ಲಿ ಅವಚ್ಛೇದಕ ಅನುಭವ ತ್ವವೇ ಆಗುತ್ತದೆ. ಘಟದ ಸ್ಮೃತಿ ಬರಬೇಕಾದರೆ ಘಟದ ಅನುಭವ ಮೊದಲು ಇರಬೇಕು. ಆಗ ಅನುಭವತ್ವಾವಚ್ಛಿನ್ನಕಾರಣತಾ ನಿರೂಪಿತ ಕಾರ್ಯತಾ

ಶ್ರಯತ್ವವು ಸ್ಮೃತಿಯಲ್ಲಿ ಬರುವುದರಿಂದ ಅತಿವ್ಯಾಪ್ತಿ ಬರುತ್ತದೆ. ಸ್ಮೃತಿ ಹೇತುತ್ವಂ (ಸ್ಮೃತಿಗೆ ಕಾರಣ) ಎಂದರೆ ಸ್ಮೃತಿಗೆ ಕಾರಣ ಸ್ಮೃತಿಯಾಗ ದಿರುವುದರಿಂದ ಅದು ಸ್ಮೃತಿಯಲ್ಲಿ ಬರುವುದಿಲ್ಲ, ಹೀಗೆ ಎರಡು ದಳಗಳೂ ಸಾರ್ಥಕಗಳಾಗಿವೆ. —

ಇಪ್ಪತ್ತನಾಲ್ಕು ಗುಣಗಳ ಲಕ್ಷಣಗಳನ್ನು ಹೇಳಿ ಈಗ ಕರ್ಮ ಲಕ್ಷಣ ಹೇಳುತ್ತಾನೆ.

**ಚಲನಾತ್ಮಕಂ ಕರ್ಮ । ಊರ್ಧ್ವದೇಶಸಂಯೋಗಹೇತು ರುತ್ಕ್ಷೇಪಣಮ್ । ಅಧೋದೇಶಸಂಯೋಗಹೇತುರಪಕ್ಷೇಪಣಮ್ । ಶರೀರಸ್ಯಸಂನಿಕೃಷ್ಟಸಂಯೋಗಹೇತುರಾಕುಂಚನಮ್ । ವಿಪ್ರಕೃಷ್ಟ ಸಂಯೋಗಹೇತುಃ ಪ್ರಸಾರಣಮ್ । ಅನ್ಯತ್ಸರ್ವಂ ಗಮನಮ್ ॥**

ಚಲನಾರೂಪವಾದದ್ದು ಕರ್ಮ. ಸಂಯೋಗಭಿನ್ನವಾಗಿ ಸಂಯೋಗಕ್ಕೆ ಅಸಮವಾಯಿಕಾರಣವಾಗಿರುತ್ತದೆ. ಉತ್ಕ್ಷೇಪಣಾದಿಭೇದದಿಂದ ಇದುಐದು ವಿಧವೆಂದು ಹಿಂದೆ ಹೇಳಿವೆ. ಉತ್ಕ್ಷೇಪಣ ರೂಪಕರ್ಮದ ಲಕ್ಷಣ ಹೇಳು ತ್ತಾನೆ. "ಊರ್ಧ್ವ— " ಇತಿ. ಮೇಲಿನ ಪ್ರದೇಶದ ಸಂಯೋಗಕ್ಕೆ ಕಾರಣ ವಾದ ಕರ್ಮವು ಉತ್ಕ್ಷೇಪಣವಾಗುತ್ತದೆ. ಹೀಗೆಯೇ ಕೆಳಗಿನ ಪ್ರದೇಶದ ಸಂಯೋಗಕ್ಕೆ ಕಾರಣವಾದ ಕರ್ಮವು ಅಪಕ್ಷೇಪಣವಾಗುತ್ತದೆ. ಶರೀರ ಮುದುಡುವುದಕ್ಕೆ ಅಂದರೆ ವಕ್ರತ್ವ ಉಂಟಾಗಲು ಕಾರಣವಾದ ಕರ್ಮವು ಆಕುಂಚನವಾಗುತ್ತದೆ. ಹಾಗೆಯೇ ವಿಪ್ರಕೃಷ್ಟ ಸಂಯೋಗ ಅಂದರೆ ಋಜು ತ್ವಸಂಪಾದಕವಾದ (ನೀಟಾಗುವಂತೆ ಮಾಡುವ) ಕರ್ಮಕ್ಕೆ ಪ್ರಸಾರಣವೆಂದು ಹೆಸರು. ಈ ನಾಲ್ಕರಿಂದ ಭಿನ್ನವಾದ ಚಲನೆಗೆ ಗಮನವೆಂದು ಹೆಸರು.

**ನಿತ್ಯಮೇಕಮನೇಕಾನುಗತಂ ಸಾಮಾನ್ಯಮ್ । ದ್ರವ್ಯಗುಣ ಕರ್ಮವೃತ್ತಿ । ಪರಂ ಸತ್ತಾ । ಅಪರಂ ದ್ರವ್ಯತ್ವಾದಿ ॥**

ಸಾಮಾನ್ಯ ಲಕ್ಷಣ ಹೇಳುತ್ತಾನೆ. ನಿತ್ಯವಾಗಿದ್ದು ಅನೇಕ ಪದಾರ್ಥಗ ಳಲ್ಲಿ ಒಂದೇ ರೀತಿಯಾಗಿ ಇರುವುದು ಸಾಮಾನ್ಯ. (ಜಾತಿ) 'ನಿತ್ಯತ್ವೇ ಸತಿ ಅನೇಕಸಮವೇತತ್ವಂ' ಎಂದು ಸಾಮಾನ್ಯಲಕ್ಷಣ. ಜಾತಿಯು ಸಮವಾಯ

ಸಂಬಂಧದಿಂದ ವಸ್ತುವಿನಲ್ಲಿರುತ್ತದೆ. ಆದುದರಿಂದ ಅನೇಕ ಸಮವೇತವಾಗ್ಯ ತ್ತದೆ. ಕೇವಲ "ಅನೇಕ ಸಮವೇತತ್ವಂ" ಎಂದರೆ ಸಂಯೋಗಾದಿ ಗುಣ ಗಳೂ ಅನೇಕ ಪದಾರ್ಥಗಳಲ್ಲಿ ಸಮವಾಯ ಸಂಬಂಧದಿಂದ ಇರುವುದರಿಂದ ಅಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದುದರಿಂದ ನಿತ್ಯತ್ವೇ ಸತಿ ಎಂದು ಹೇಳಬೇಕು. ಸಂಯೋಗ ನಿತ್ಯವಲ್ಲ. ಕೇವಲ 'ನಿತ್ಯತ್ವಂ' ಎಂಬ ಲಕ್ಷಣ ಹೇಳಿದರೆ ಆಕಾ ಶಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಆಕಾಶ ಕಾಲಾದಿಗಳು ನಿತ್ಯಪದಾರ್ಥ ವಾದುದರಿಂದ ನಿತ್ಯತ್ವ ಅಲ್ಲಿ ಬರುತ್ತದೆ. ಅನೇಕ ಸಮವೇತ ಅಂದರೆ ಆಕಾ ಶಾದಿಗಳು ಅನೇಕ ವಸ್ತುಗಳಲ್ಲಿ ಸಮವಾಯ ಸಂಬಂಧದಿಂದ ಇರುವುದಿಲ್ಲ. ಹೀಗೆಯೇ "ನಿತ್ಯತ್ವೇ ಸತಿ ಸಮವೇತತ್ವಂ" ಎಂದು ಮಾತ್ರ ಹೇಳಿದರೆ (ನಿತ್ಯ ವಾಗಿದ್ದು ಸಮವಾಯ ಸಂಬಂಧದಿಂದ ಇರುವುದು) ಆಕಾಶದಲ್ಲಿರುವ ಏಕತ್ವ ಸಂಖ್ಯೆಯಲ್ಲಿಯೂ ಜಲಪರಮಾಣುವಿನಲ್ಲಿರುವ ರೂಪಾದಿಗಳಲ್ಲಿಯೂ ಅತಿ ವ್ಯಾಪ್ತಿ ಬರುತ್ತದೆ. ಆಕಾಶದ ಏಕತ್ವ ಸಂಖ್ಯೆಯೂ, ಜಲಪರಮಾಣುವಿನ ರೂಪವೂ ನಿತ್ಯವಾಗಿ ಸಮವಾಯ ಸಂಬಂಧದಿಂದ ಇರುತ್ತದೆ. ಆದುದರಿಂದ ಅನೇಕ ಸಮವೇತತ್ವಂ ಎಂದಿರುತ್ತಾನೆ. ಆಕಾಶ ಸಂಖ್ಯಾದಿಗಳು ಅನೇಕ ಪದಾರ್ಥಗಳಲ್ಲಿ ಸಮವಾಯ ಸಂಬಂಧದಿಂದ ಇರುವುದಿಲ್ಲ. ಈ ಜಾತಿಯು ದ್ರವ್ಯ ಗುಣ ಕರ್ಮ ಈ ಮೂರರಲ್ಲಿ ಇರುತ್ತದೆ. ಪರ, ಅಪರವೆಂದು ಇದು ಎರಡು ವಿಧ ಎಂದು ಹಿಂದೆ ಹೇಳಿದೆ. ಸತ್ತಾ ಎಂಬುದು ಪರಜಾತಿ. ದ್ರವ್ಯ ಗುಣ ಕರ್ಮ ಮೂರರಲ್ಲಿರುವ ಜಾತಿ. ದ್ರವ್ಯತ್ವಾದಿಗಳು ಅಪರ ಜಾತಿ. ಸತ್ತಾಜಾತಿಗಿಂತ ನ್ಯೂನದೇಶದಲ್ಲಿರುತ್ತವೆ. ಪರಾಪರ ಎಂದು ಇನ್ನೊಂದು ವಿಭಾಗ ಮಾಡಿದರೆ ದ್ರವ್ಯತ್ವಾದಿಗಳು ಪರಾಪರಜಾತಿಯಾಗುತ್ತವೆ. ಸತ್ತಾ ಜಾತಿಗಿಂತ ಅಪರ. ಘಟತ್ವಾದಿಗಳಿಗಿಂತ ಪರವಾಗುತ್ತವೆ. ಘಟತ್ವಕ್ಕಿಂತ ನ್ಯೂನದೇಶದಲ್ಲಿರುವ ಬೇರೆಜಾತಿಯಿಲ್ಲದಿರುವುದರಿಂದ ಘಟತ್ವಾದಿಗಳು ಕೇವಲ ಅಪರಜಾತಿ. ಸತ್ತಾ ಜಾತಿಗಿಂತ ಪರಜಾತಿ ಇನ್ನೊಂದಿಲ್ಲದಿರುವುದರಿಂದ ಕೇವಲ ಪರಜಾತಿಯಾಗುತ್ತದೆ.

### ನಿತ್ಯದ್ರವ್ಯವೃತ್ತಯೋ ವ್ಯಾವರ್ತಕಾ ವಿಶೇಷಾಃ॥

ವಿಶೇಷದ್ರವ್ಯದ ಲಕ್ಷಣ ಹೇಳುತ್ತಾನೆ. ನಿತ್ಯದ್ರವ್ಯಗಳಲ್ಲಿ ಮಾತ್ರ ಇದ್ದು ವ್ಯಾವೃತ್ತಿಪಡಿಸುವವುಗಳು ವಿಶೇಷಗಳು. ಇವು ಅನಂತವಾಗಿವೆ. ನಿತ್ಯದ್ರವ್ಯ

ಗಳಲ್ಲಿ ಪರಸ್ಪರ ಭೇದಸಾಧನೆಗೋಸ್ಕರ ತಾರ್ಕಿಕರು ವಿಶೇಷವೆಂಬ ಪದಾರ್ಥ ವನ್ನು ಸ್ವೀಕರಿಸಿರುತ್ತಾರೆ. "ಈ ಪೃಥಿವೀ ಪರಮಾಣು (ಇತರ ಪದಾರ್ಥ) ಇತರ ಪರಮಾಣುಗಳಿಗಿಂತ ಬೇರೆಯಾಗಿವೆ. ಈ ಪರಮಾಣು ವಿಶೇಷದಿಂದ." ಎಂದು ಅನುಮಾನದಿಂದ ಇತರ ಭೇದವನ್ನು ಸಾಧಿಸುತ್ತಾರೆ. ನಿತ್ಯದ್ರವ್ಯ ಗಳಲ್ಲಿ ಇದು ಸಮವಾಯ ಸಂಬಂಧದಿಂದ ಇರುತ್ತದೆ.

**ನಿತ್ಯಸಂಬಂಧಃ ಸಮವಾಯಃ। ಅಯುತಸಿದ್ಧವೃತ್ತಿಃ। ಯಯೋರ್ದ್ವಯೋರ್ಮಧ್ಯೇ ಏಕಮವಿನಶ್ಯದವಸ್ಥಮಪರಾಶ್ರಿತಮೇವ ಅವತಿಷ್ಠತೇ ತಾವಯುತಸಿದ್ಧೌ। ಯಥಾ ಅವಯವಾವಯವಿನೌ, ಗುಣಗುಣಿನೌ, ಕ್ರಿಯಾಕ್ರಿಯಾವಂತೌ, ಜಾತಿವ್ಯಕ್ತೀ, ವಿಶೇಷ ನಿತ್ಯದ್ರವ್ಯೇ ಚೇತಿ॥**

ನಿತ್ಯವಾಗಿ ಸಂಬಂಧರೂಪವಾಗಿರುವುದು ಸಮವಾಯ. ಇದು ಅಯುತ ಸಿದ್ಧವಾದ ಪದಾರ್ಥಗಳಲ್ಲಿರುತ್ತದೆ. ಅಯುತಸಿದ್ಧವೆಂದರೇನು ಎಂಬುದನ್ನು ವಿವರಿಸುತ್ತಾನೆ. ಯಾವ ಎರಡು ವಸ್ತುಗಳ ಮಧ್ಯದಲ್ಲಿ ಒಂದು ವಿನಾಶ ಹೊಂದದ ಅವಸ್ಥೆಯುಳ್ಳದಾಗಿ (ಸ್ವರೂಪದಿಂದ) ಇನ್ನೊಂದನ್ನು ಯಾವಾಗಲೂ ಆಶ್ರಯಿಸಿಕೊಂಡೇ ಇರುವುದಾದರೆ ಅವೆರಡು ಅಯುತಸಿದ್ಧಗಳಾಗುತ್ತವೆ. ಒಂದು ಒಂದನ್ನು ಬಿಡದೇ ಇರುವುದು ಅವೆರಡೂ ಅಯುತಸಿದ್ಧಗಳು. ಅವುಗಳ ಸಂಬಧವೇ ಸಮವಾಯ. ಅಯುತಸಿದ್ಧ ಪದಾರ್ಥಗಳನ್ನು ತೋರಿಸುತ್ತಾನೆ. ಅವಯವ ಅವಯವಿಗಳು, ಗುಣ ಗುಣಿ (ಗುಣವುಳ್ಳದ್ದು) ಗಳು. ಕ್ರಿಯೆ ಕ್ರಿಯಾವುಳ್ಳದ್ದು, ಜಾತಿವ್ಯಕ್ತಿಗಳು. ವಿಶೇಷನಿತ್ಯದ್ರವ್ಯಗಳು. ಇವು ಅಯುತಸಿದ್ಧವಾಗುತ್ತವೆ. ಅವಯವ ಶರೀರವನ್ನು ಬಿಟ್ಟಿರುವುದೇ ಇಲ್ಲ. ಹೀಗೆ ಮುಂದೆಯೂ ತಿಳಿಯಬೇಕು. 'ಯನ್ನಿಷ್ಠಕಾಲನಿರೂಪಿತಾಧೇಯತಾ ಸಾಮಾನ್ಯಂ ಯದವಚ್ಛಿನ್ನಂ ತದುಭಯಾನ್ಯತರತ್ವಂ ಅಯುತಸಿದ್ಧತ್ವಂ' ಎಂದು ಲಕ್ಷಣ. ದೇಶ ಅಧಿಕರಣವಾದರೆ ಕಾಲ ಅವಚ್ಛೇದಕವೂ ಕಾಲ ಅಧಿಕರಣ ವಾದರೆದೇಶವು ಅವಚ್ಛೇದಕವೂ ಆಗುತ್ತದೆ. ಈಗಘಟದಲ್ಲಿ ರೂಪವಿದೆಎಂದರೆ ರೂಪಕ್ಕೆಕಾಲವೂ ಘಟರೂಪದೇಶವೂ ಅಧಿಕರಣವಾಗಿ ತೋರುತ್ತವೆ. ಘಟವು ರೂಪಕ್ಕೆ ಸಾಕ್ಷಾತ್ ಅಧಿಕರಣ. ಕಾಲವು ಪರಂಪರೆಯಿಂದ ಅಧಿಕರಣ.

ಯತ್‌ಪದದಿಂದ ರೂಪತೆಗೆದುಕೊಂಡರೆ ರೂಪದಲ್ಲಿ ಆಧೇಯತಾ ಇದೆ. ಕಾಲ ಅಧಿಕರಣ. ಈ ಅಧೇಯತೆಯು ಕಾಲ ನಿರೂಪಿತವಾಗುತ್ತದೆ. ಮತ್ತು ಘಟಾವಚ್ಛಿನ್ನವಾಗುತ್ತದೆ. ಯದವಚ್ಛಿನ್ನಂ ಎಂಬಲ್ಲಿ ಯತ್‌ಪದದಿಂದ ಘಟತೆಗೆದುಕೊಳ್ಳಬೇಕು. ತದುಭಯ ಅಂದರೆ ಯತ್ಪದದಿಂದ ತೋರಿದ ರೂಪಘಟ ಎರಡೂ ಆಗುತ್ತದೆ. ತದನ್ಯತರತ್ವ ಎರಡರಲ್ಲಿಯೂ ಬರುವುದರಿಂದ ರೂಪಘಟಗಳು ಅಯುತಸಿದ್ಧಗಳು. ಹೀಗೆಯೇ 'ಇದಾನೀಂ ಕಾಪಾಲೇ ಘಟಃ' ಎಂಬಲ್ಲಿ (ಕಪಾಲಾವಯವಗಳಲ್ಲಿ ಘಟ ಅವಯವಿ ಇದೆ) ಯೂ ತಿಳಿಯಬೇಕು.

**ಅನಾದಿಃ ಸಾಂತಃ ಪ್ರಾಗಭಾವಃ। ಉತ್ಪತ್ತೇಃ ಪೂರ್ವಂ ಕಾರ್ಯಸ್ಯ। ಸಾದಿರನಂತಃ ಪ್ರಧ್ವಂಸಃ। ಉತ್ಪತ್ತ್ಯನಂತರಂ ಕಾರ್ಯಸ್ಯ॥**

ಅಭಾವಭೇದಗಳ ಲಕ್ಷಣ ತೋರಿಸುತ್ತಾನೆ. ಉತ್ಪತ್ತಿ ಇಲ್ಲದೆ ನಾಶವಿರುವುದು ಪ್ರಾಗಭಾವ. ಇದು ಹುಟ್ಟುವುದಿಲ್ಲ. ಇದಕ್ಕೆ ನಾಶವಿದೆ. ಕಾರ್ಯ ಹುಟ್ಟಬೇಕಾದರೆ ಮೊದಲು ಇರುತ್ತದೆ. ಘಟದ ಪ್ರಾಗಭಾವ ಅಂದರೆ ಘಟ ಹುಟ್ಟಬೇಕಾದರೆ ಮೊದಲು ಇರುವಘಟದ ಅಭಾವ. ಅಭಾವಕ್ಕೆ ಪ್ರತಿಯೋಗಿ ಘಟ. ತನ್ನ ಪ್ರತಿಯೋಗಿಯಾದ ಘಟದ ಸಮವಾಯಿಕಾರಣದಲ್ಲಿ ಇರುತ್ತದೆ—

ಉತ್ಪತ್ತಿ ಇದ್ದು ನಾಶವಿಲ್ಲದಿರುವುದು ಪ್ರಧ್ವಂಸಾಭಾವವಾಗುತ್ತದೆ. ಘಟಧ್ವಂಸವು ದೊಣ್ಣೆಯಿಂದ ಹೊಡೆದರೆ ಹುಟ್ಟುತ್ತದೆ. ಧ್ವಂಸ ಹುಟ್ಟಿದ ಮೇಲೆ ಪುನಃ ಅದರ ನಾಶವಿರುವುದಿಲ್ಲ. ಕಾರ್ಯ ಹುಟ್ಟಿದ ಮೇಲೆ ಇದು ಇರುತ್ತದೆ.

**ತ್ರೈಕಾಲಿಕ ಸಂಸರ್ಗಾವಚ್ಛಿನ್ನಪ್ರತಿಯೋಗಿತಾಕೋಽತ್ಯಂತಾಭಾವಃ॥ ಯಥಾ ಭೂತಲೇ ಘಟೋ ನಾಸ್ತೀತಿ॥**

'ತ್ರೈಕಾಲಿಕತ್ವೇ ಸತಿ ಸಂಸರ್ಗಾವಚ್ಛಿನ್ನಪ್ರತಿಯೋಗಿತಾಕಃ ಅತ್ಯಂತಾಭಾವಃ' ಎಂದು ಹೇಳಬೇಕು. ಇದು ಭೂತಭವಿಷ್ಯದ್ವರ್ತಮಾನ ಮೂರು ಕಾಲದಲ್ಲಿಯೂ ಇರುತ್ತದೆ. ಮೂರು ಕಾಲದಲ್ಲಿಯೂ ಇರುವುದು ಎಂದುದರಿಂದ ನಿತ್ಯವೆಂದಾಗುತ್ತದೆ. ಧ್ವಂಸಕ್ಕೆ ಪ್ರತಿಯೋಗಿಯಾದರೆ ಪ್ರಾಗಭಾವಕ್ಕೆ ಪ್ರತಿಯೋಗಿಯಾದರೆ ಅದು ಅನಿತ್ಯವಾಗುತ್ತದೆ. ಇದು ಅನೆರಡಕ್ಕೂ ಅಪ್ರತಿ

ಯೋಗಿಯಾಗುವುದರಿಂದ ನಿತ್ಯನಾಗಿವೆ. ಅನ್ಯೋನ್ಯಾಭಾವ ಭಿನ್ನವಾದದ್ದೇ ಸಂಸರ್ಗಾಭಾವ. ಆದುದರಿಂದ ಪ್ರಾಗಭಾವಾಪ್ರತಿಯೋಗಿತ್ವೇ ಸತಿ ಧ್ವಂಸಾ ಪ್ರತಿಯೋಗಿತ್ವೇ ಸತಿ ಅನ್ಯೋನ್ಯಾಭಾವಭಿನ್ನತ್ವೇ ಸತಿ ಅಭಾವತ್ವಂ ಎಂದು ಅತ್ಯಂತಾಭಾವದ ಲಕ್ಷಣವಾಗುತ್ತದೆ. ಅಭಾವತ್ವಂ ಎಂದು ಹೇಳದಿದ್ದರೆ ಆಕಾಶದಲ್ಲಿ ಅತಿವ್ಯಾಪ್ತಿ ಬರುತ್ತದೆ. ಆಕಾಶ ನಿತ್ಯವಾದುದರಿಂದ ಹಿಂದೆ ಹೇಳಿದ ಮೂರು ದಳಗಳೂ ಬರುತ್ತವೆ. ಆಕಾಶ ಅಭಾವವಲ್ಲ. ಆದುದರಿಂದ ಅಭಾವತ್ವ ಅದರಲ್ಲಿ ಬರುವುದಿಲ್ಲ. ಪ್ರಾಗಭಾವದಲ್ಲಿ ಅತಿವ್ಯಾಪ್ತಿವಾರಣೆ ಮಾಡಲು ಮೊದಲನೆಯ ದಳವೂ, ಧ್ವಂಸದಲ್ಲಿ ವಾರಣೆಮಾಡಲು ದ್ವಿತೀಯ ದಳವೂ, ಅನ್ಯೋನ್ಯಾಭಾವದಲ್ಲಿ ಅತಿವ್ಯಾಪ್ತಿ ಹೋಗಲಾಡಿಸಲು ಮೂರನೇ ದಳವೂ ಸಾರ್ಥಕವಾಗಿವೆ. ಸಂಸರ್ಗಾಭಾವವನ್ನು ಪರಿಷ್ಕರಿಸಿದರೆ ಅಂದರೆ 'ತಾದಾತ್ಮ್ಯಭಿನ್ನಸಂಬಂಧಾವಚ್ಛಿನ್ನ ಪ್ರತಿಯೋಗಿತಾಕಾಭಾವತ್ವಂ' ಎಂದರೆ ಆಗ ತ್ರೈಕಾಲಿಕಪದ ಹೇಳಬೇಕಾಗಿಲ್ಲ. ಹಾಗೂ ಹೇಳಿದರೆ ಆಗ ಅದು ಅಭಾವ ಸ್ವರೂಪವನ್ನು ಹೇಳುತ್ತದೆ ಎಂದು ಹೇಳಬೇಕು. ಸಂಯೋಗಸಂಬಂಧದಿಂದ ಘಟವಿಲ್ಲ ಅಂದರೆ ಅಭಾವಕ್ಕೆ ಘಟ ಪ್ರತಿಯೋಗಿಯಾಗುತ್ತದೆ. ಘಟದಲ್ಲಿರುವ ಪ್ರತಿಯೋಗಿತೆಯು ಸಂಯೋಗ ಸಂಬಂಧಾವಚ್ಛಿನ್ನವಾಗುತ್ತದೆ. ಧ್ವಂಸವನ್ನಾಗಲೀ ಪ್ರಾಗಭಾವವನ್ನಾಗಲೀ ಹೇಳುವುದಾದರೆ ಸ್ವರೂಪದಿಂದಲೇ ಹೇಳುವುದರಿಂದ ತಾದಾತ್ಮ್ಯ ಭಿನ್ನಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕತ್ವ ಧರ್ಮ ಅಲ್ಲಿ ಬರುವುದಿಲ್ಲ. ಅನ್ಯೋನ್ಯಾಭಾವವನ್ನು ತಾದಾತ್ಮ್ಯದಿಂದ ಹೇಳುವುದರಿಂದ ಅಲ್ಲಿಯೂ ಅತಿವ್ಯಾಪ್ತಿ ಬರುವುದಿಲ್ಲ. ಭೂಮಿಯಲ್ಲಿ ಘಟವಿಲ್ಲ ಎಂಬಲ್ಲಿ ಘಟದ ಅತ್ಯಂತಾಭಾವ ಭೂಮಿಯಲ್ಲಿ ತೋರುತ್ತದೆ.

**ತಾದಾತ್ಮ್ಯಸಂಬಂಧಾವಚ್ಛಿನ್ನಪ್ರತಿಯೋಗಿತಾಕೋऽನ್ಯೋನ್ಯಾಭಾವಃ। ಯಥಾ—ಘಟಃ ಪಟೋ ನೇತಿ॥**

ತಾದಾತ್ಮ್ಯ ಸಂಬಂಧದಿಂದ ವಸ್ತುವಿನ ಅಭಾವ ಹೇಳಿದರೆ ಅದು ಅನ್ಯೋನ್ಯಾಭಾವವಾಗುತ್ತದೆ. ಘಟವು ಪಟ(ವಸ್ತ್ರ)ವಲ್ಲ ಎಂದರೆ ತಾದಾತ್ಮ್ಯದಿಂದ ಪಟವಲ್ಲ ಎಂದು ತೋರುತ್ತದೆ. ಪಟದಲ್ಲಿರುವ ಪ್ರತಿಯೋಗಿತೆಯು ತಾದಾತ್ಮ್ಯಸಂಬಂಧಾವಚ್ಛಿನ್ನವಾಗಿರುತ್ತದೆ. ಅದನ್ನು ನಿರೂಪಿಸುವುದು (ನಿರೂ

ಪಕ) ಅಭಾವ. ಆದುದರಿಂದ 'ತಾದಾತ್ಮ್ಯಸಂಬಂಧಾವಚ್ಛಿನ್ನ ಪ್ರತಿಯೋಗಿತಾ ಕತ್ವೇ ಸತಿ ಅಭಾವತ್ವಂ' ಎಂಬುದು ಅನ್ಯೋನ್ಯಾಭಾವಲಕ್ಷಣವಾಗುತ್ತದೆ. ಕೇವಲ ಪ್ರತಿಯೋಗಿತಾ ನಿರೂಪಕ ಎಂದರೆ ಧ್ವಂಸ ಪ್ರಾಗಭಾವಗಳಲ್ಲಿ ಅತಿ ವ್ಯಾಪ್ತಿ. ಸಂಬಂಧಾವಚ್ಛಿನ್ನ ಪ್ರತಿಯೋಗಿತಾಕ ಅಂದರೆ ಅತ್ಯಂತಾಭಾವದಲ್ಲಿ ಅತಿವ್ಯಾಪ್ತಿ. ಆದುದರಿಂದ ತಾದಾತ್ಮ್ಯ ಸಂಬಂಧ ಹೇಳಿದೆ.

**ಸರ್ವೇಷಾಂ ಪದಾರ್ಥಾನಾಂ ಯಥಾಯಥಮುಕ್ತೇಷ್ವಂತ**
**ರ್ಭಾವಾತ್ ಸಪ್ತೈವ ಪದಾರ್ಥಾ ಇತಿ ಸಿದ್ಧಮ್ ॥**

**ಕಣಾದನ್ಯಾಯಮತಯೋರ್ಬಾಲವ್ಯುತ್ಪತ್ತಿಸಿದ್ಧಯೇ ॥**
**ಅನ್ನಂಭಟ್ಟೇನ ವಿದುಷಾ ರಚಿತಸ್ತರ್ಕಸಂಗ್ರಹಃ ॥**

**ಇತಿ ಮಹಾಮಹೋಪಾಧ್ಯಾಯಾನ್ನಂಭಟ್ಟವಿರಚಿತಸ್ತರ್ಕ**
**ಸಂಗ್ರಹಃ ಸಮಾಪ್ತಃ ॥**

ಉಳಿದ ಎಲ್ಲಾ ಪದಾರ್ಥಗಳೂ ಯಾವುದೋ ಒಂದು ರೀತಿಯಿಂದಇಲ್ಲಿ ಹೇಳಿದ ಪದಾರ್ಥಗಳಲ್ಲಿಯೇ ಅಂತರ್ಭಾವ ಹೊಂದುವುದರಿಂದ ಏಳೇ ಪದಾರ್ಥ ಗಳೆಂದು ಸಿದ್ಧವಾಗುತ್ತದೆ. ಪ್ರಮಾಣ, ಪ್ರಮೇಯ, ಸಂಶಯ, ಪ್ರಯೋಜನ, ದೃಷ್ಟಾಂತ, ಸಿದ್ಧಾಂತ, ಅವಯವ, ತರ್ಕ, ನಿರ್ಣಯ, ವಾದ, ಜಲ್ಪ, ವಿತಂಡಾ, ಹೇತ್ವಾಭಾಸ, ಛಲ, ಜಾತಿ, ನಿಗ್ರಹ ಸ್ಥಾನಗಳೆಂದು ಹದಿನಾರು ಪದಾರ್ಥಗಳು ನ್ಯಾಯಸೂತ್ರದಲ್ಲಿ ಹೇಳಿವೆ. ಇವೆಲ್ಲವೂ ಈ ಏಳು ಪದಾರ್ಥಗ ಳಲ್ಲಿಯೇ ಸೇರಿರುವುದರಿಂದ ಇನ್ನು ಬೇರೆ ಪದಾರ್ಥ ಇಲ್ಲವೆಂದು ತಾತ್ಪರ್ಯ. ಈ ಪದಾರ್ಥ ಜ್ಞಾನದಿಂದ ಪರಮಪ್ರಯೋಜನ ಮೋಕ್ಷವುಂಟಾಗುತ್ತದೆಂದು ತಾರ್ಕಿಕರ ಸಿದ್ಧಾಂತ. ಹೀಗೆ ಪದಾರ್ಥಗಳನ್ನು ನಿರೂಪಿಸಿ ಈಗ ಗ್ರಂಥ ಸಮಾಪ್ತಿಯನ್ನು ತೋರಿಸುತ್ತಾನೆ.

ಇತರ ಶಾಸ್ತ್ರವನ್ನರಿತರೂ ತರ್ಕಶಾಸ್ತ್ರವನ್ನು ತಿಳಿಯದ ಬಾಲಕರ ವ್ಯುತ್ಪತ್ತಿಗೋಸ್ಕರ ಕಣಾದ, ನ್ಯಾಯ ಈ ಎರಡು ಸಿದ್ಧಾಂತವನ್ನು ತಿಳಿಯಲು, ಇವರಲ್ಲಿ ವಿಶೇಷ ಜ್ಞಾನವುಂಟಾಗಲು ಪಂಡಿತನಾದ ಅನ್ನಂಭಟ್ಟನಿಂದ ಈ ತರ್ಕಸಂಗ್ರಹವು ರಚಿಸಲ್ಪಟ್ಟಿದೆ.

ಕಣಾದ, ಮತ್ತು ಗೌತಮ ಋಷಿಗಳು ತರ್ಕಶಾಸ್ತ್ರವನ್ನು ಬರೆದವರು. ಕಣಾದರ ಸೂತ್ರಕ್ಕೆ ವೈಶೇಷಿಕ ಸೂತ್ರಗಳೆಂದೂ, ಗೌತಮರ ಸೂತ್ರಕ್ಕೆ ನ್ಯಾಯಸೂತ್ರಗಳೆಂದೂ ಹೆಸರು. ಇವರ ಸಿದ್ಧಾಂತಗಳಲ್ಲಿ ವ್ಯತ್ಯಾಸವಿದೆ. ಆದುದರಿಂದ ಇವರಿಬ್ಬರ ನ್ಯಾಯಶಾಸ್ತ್ರದಲ್ಲಿಯೂ ಸೂಕ್ಷ್ಮಪರಿಚಯವುಂಟಾಗಲು ಅನ್ನಂಭಟ್ಟ ಪಂಡಿತರು ತರ್ಕಶಾಸ್ತ್ರ ಪ್ರವೇಶದಾಯಕವಾದ ತರ್ಕಸಂಗ್ರಹವನ್ನು ಬಾಲಕರಿಗೆ ಬರೆದಿರುತ್ತಾರೆ. ಪ್ರಕೃತ ತರ್ಕಶಾಸ್ತ್ರದ ಪರಿಚಯವು ಉಭಯಭಾಷಾಭ್ಯಾಸಿಗಳಿಗೆ ಸುಲಭವಾಗಿ ಉಂಟಾಗಲೆಂದೂ ಇದರಿಂದ ಮುಂದೆ ತರ್ಕಶಾಸ್ತ್ರ ಓದಲು ಉತ್ಸಾಹ ಅಭಿವೃದ್ಧವಾಗಲೆಂದೂ ನಾನು ಕನ್ನಡದಲ್ಲಿ ಇದಕ್ಕೆ ವ್ಯಾಖ್ಯಾನ ಬರೆದಿರುತ್ತೇನೆ. ಇದರಲ್ಲಿ ಲೋಪದೋಷಗಳನ್ನು ಸರಿಪಡಿಸಿಕೊಂಡು ಸಾರವನ್ನು ಗ್ರಹಿಸಿ ಸಕಲ ಕರ್ಣಾಟಕ ಸಹೋದರರು ಸಂಸ್ಕೃತ ಜ್ಞಾನವನ್ನು ಪಡೆದು ಶಾಸ್ತ್ರಜ್ಞಾನವನ್ನು ಗಳಿಸಿ ಆದರಿಂದ ಭಾರತದ ಕೀರ್ತಿಯನ್ನು ಬೆಳಗಿಸಲೆಂದು ಹಾರೈಸುತ್ತೇನೆ.

**ತರ್ಕಸಂಗ್ರಹವ್ಯಾಖ್ಯೇಯಂ ವಿಷ್ಣುಮೂರ್ತಿಕೃತಾ ಶುಭಾ ।**
**ತರ್ಕವ್ಯುತ್ಪತ್ಸುಕರ್ಣಾಟಸುಹೃದಾಂ ತನುತಾಂ ಮುದಮ್ ॥**

— ಶ್ರೀಃ —

# ಪಾರಿಭಾಷಿಕ ಪದಾರ್ಥ ಸಂಗ್ರಹ

**ಅಖಂಡೋಪಾಧಿ**–ಅನಿರ್ವಚನೀಯವಾದ ಧರ್ಮ. ಸಮವಾಯ ಸಂಬಂಧ ದಿಂದ ಇರದೆ ಅನುಗತವಾಗಿರುವ ಧರ್ಮ. An attribute that is not a jati but similar to it.

**ಅಣು**—ಅತಿಕ್ಷುದ್ರಪರಿಮಾಣವುಳ್ಳದ್ದು. ಸೂಕ್ಷ್ಮಪದಾರ್ಥವಾಗಿದ್ದು ಪದಾರ್ಥಕ್ಕೆ ಆರಂಭಕವಾಗಿರುವುದು. Atom.

**ಅತಿದೇಶವಾಕ್ಯ**—ಒಂದುಕಡೆ ಕೇಳಿರುವುದಕ್ಕೆ ಇನ್ನೊಂದುಕಡೆ ಸಂಬಂಧ. Assimilative Proposition.

**ಅತಿಪ್ರಸಕ್ತಿ**—ಪ್ರಸ್ತುತವಿಷಯಕ್ಕಿಂತ ಬೇರೆಕಡೆ ಬರುವುದು. ಅಪ್ರಕೃತದಲ್ಲಿ ಬರುವುದು. too extensive, too wide.

**ಅತಿವ್ಯಾಪ್ತಿ**—ಅಲಕ್ಷ್ಯದಲ್ಲಿ ಲಕ್ಷಣ ಬರುವುದು. ಲಕ್ಷ್ಯದಲ್ಲಿದ್ದು ಅಲಕ್ಷ್ಯದಲ್ಲಿಯೂ ಇರುವುದು. Too wide, Over applicability.

**ಅತೀಂದ್ರಿಯ**—ಇಂದ್ರಿಯಗಳಿಂದ ಗ್ರಹಿಸಲ್ಪಡದಿರುವುದು. Super–sensible.

**ಅತ್ಯಂತಾಭಾವ**—ನಿತ್ಯಸಂಸರ್ಗಾಭಾವ. ತ್ರೈಕಾಲಿಕಸಂಸರ್ಗಾವಚ್ಛಿನ್ನಪ್ರತಿಯೋಗಿತಾಕಾಭಾವ. Absolute Non–existence.

**ಅಧಿಕರಣ**—ಆಶ್ರಯ. ಆಧಾರ. ಪರಂಪರೆಯಿಂದ ಕ್ರಿಯೆಗೆ ಆಶ್ರಯವಾದದ್ದು. Substratum.

**ಅಧಿಷ್ಠಾನ**—ಆಶ್ರಯ. Substratum.

**ಅಧ್ಯಾಹಾರ**—ಪ್ರಕೃತಕ್ಕೆ ಬೇಕಾದ ಶಬ್ದಕಲ್ಪನೆ. ಇಲ್ಲದಿರುವ ಪದವನ್ನು ಅನುಸಂಧಾನ ಮಾಡಿಕೊಳ್ಳುವುದು. Supplying.

**ಅನವಸ್ಥಾ**—ಅಪ್ರಾಮಾಣಿಕ ಅನಂತ ಪ್ರವಾಹ ಮೂಲಕ ಪ್ರಸಂಗ. ಉಪಪಾದ್ಯ ಉಪಪಾದಕಪ್ರವಾಹ (ಅನವಧಿಃ) ವಿಶ್ರಾಂತಿ ಇಲ್ಲದೆ ಕಲ್ಪಿಸುತ್ತಾ ಹೋಗುವುದು. Endless regression, Endless series of statements.

**ಅನಾದಿ**—ಉತ್ಪತ್ತಿ ಇಲ್ಲದಿರುವುದು. Beginningless.

**ಅನಿತ್ಯ**—ಧ್ವಂಸಪ್ರತಿಯೋಗಿಯಾಗಿ ಪ್ರಾಗಭಾವಕ್ಕೆ ಪ್ರತಿಯೋಗಿಯಾಗಿರುವುದು. Non-eternal.

**ಅನುದ್ಭೂತ**—ಪ್ರತ್ಯಕ್ಷಕ್ಕೆ ಅಪ್ರಯೋಜಕವಾಗಿರುವುದು. Sub-perceptional.

**ಅನುಪಲಬ್ಧಿ**—ಯೋಗ್ಯವಾಗಿ ಅನುಪಲಂಭಾಭಾವಪ್ರಮೆಗೆ ಕಾರಣವಾದದ್ದು. Non-perception, Non-recognition.

**ಅನುಪಸಂಹಾರಿ**—ಅನ್ವಯ ವ್ಯತಿರೇಕ ದೃಷ್ಟಾಂತರಹಿತ ಹೇತು. Non-conclusive reason.

**ಅನುಮಾನ**—ವ್ಯಾಪ್ತಿಪಕ್ಷ ಧರ್ಮತಾದಿಂದ ಕೂಡಿದ ಲಿಂಗಜ್ಞಾನ. ಅನುಮಿತಿಗೆ ಕರಣವಾಗಿರುವುದು. Instrument of Inference.

**ಅನುಮಿತಿ**—ಪರಾಮರ್ಶದಿಂದ ಹುಟ್ಟಿದಜ್ಞಾನ. ವ್ಯಾಪ್ತಿಜ್ಞಾನದಿಂದ ಬಂದ ವ್ಯಾಪಕಜ್ಞಾನ. ಅನುಮಾನದಿಂದ ಬಂದ ಜ್ಞಾನ. Inference.

**ಅನುಯೋಗಿ**—ಅಭಾವಕ್ಕೆ ಆಶ್ರಯವಾಗಿರುವುದು.. ಎಲ್ಲಿ ಅಭಾವ ಹೇಳುತ್ತೇವೋ ಅದು. Correlated substratum.

**ಅನುವ್ಯವಸಾಯ**—ಜ್ಞಾನ ವಿಷಯವಾಗಿರುವ ಜ್ಞಾನ. ಲೌಕಿಕಮಾನಸ ಪ್ರತ್ಯಕ್ಷಕ್ಕೆ ವಿಷಯವಾಗಿರುವುದು. After-cognition in which the Subject also is presented.

**ಅನೈಕಾಂತಿಕ**—ಸಾಧ್ಯಸಂದೇಹವನ್ನು ಹುಟ್ಟಿಸುವ ಪಕ್ಷಧರ್ಮತಾ ಜ್ಞಾನದಲ್ಲಿ ವಿಷಯವಾಗಿರುವುದು. Unsteadiness. Having many objects.

**ಅನ್ಯಥಾಸಿದ್ಧಿ**—ಯಾವುದನ್ನು ಕಾರಣವಾಗಿ ಸ್ವೀಕರಿಸದಿದ್ದರೂ ಕಾರ್ಯವಾಗುವುದೋ ಅದು. Dispensable antecedent.

**ಅನ್ವಯವ್ಯಭಿಚಾರ**—ಕಾರಣವಿದ್ದು ಕಾರ್ಯ ಇಲ್ಲದಿರುವುದು. *Sequence of positive factors.*

**ಅನ್ವಯವ್ಯಾಪ್ತಿ**—ಹೇತುಸಾಧ್ಯಗಳ ವ್ಯಾಪ್ತಿ. Affirmative concomitance.

**ಅನ್ವಯಸಹಚಾರ**—ಕಾರಣವಿದ್ದು ಕಾರ್ಯ ಇರುವುದು. Seqnence of Positive factors.

**ಅಯಥಾರ್ಥಾನುಭವ**—ಬಾಧಿತಾರ್ಥವಿಷಯಕಅನುಭವ. ಮಿಥ್ಯಾಜ್ಞಾನ. Erroneous experience.

**ಅಯುತಸಿದ್ಧಿ**—ಯಾವಾಗಲೂ ಸೇರಿರುವವುಗಳು. ಅಸಂಬದ್ಧವಾಗಿ ಇರದಿರುವವುಗಳು. Inseparables.

**ಅಯೋನಿಜ**—ಶುಕ್ರಶೋಣಿತ ಸಂಬಂಧದಿಂದ ಉಂಟಾಗದಿರುವುದು. Generated equivocally.

**ಅರ್ಥಾಪತ್ತಿ**—ಅನುಪಪದ್ಯಮಾನವಾದ (ಕೂಡದಿರುವ) ಅರ್ಥಜ್ಞಾನದಿಂದ ಉಪಪಾದಕವಾದ (ಅದನ್ನು ಸಮರ್ಥಿಸುವ) ಅರ್ಥಾಂತರಕಲ್ಪನೆ. Presumptive testimony.

**ಅವಚ್ಛಿನ್ನ**—ಧರ್ಮದಿಂದ ಸಂಕೋಚಗೊಳಿಸಲ್ಪಟ್ಟ. ಕೂಡಿರುವ. ಆಯಾಯ ಪದಾರ್ಥವಿಶಿಷ್ಟ. Delimited.

**ಅವಚ್ಛೇದ**—ವಿಶೇಷಣದಿಂದ ವಿಶೇಷಗೊಳಿಸುವುದು. Delimit.

**ಅವಚ್ಛೇದಕ**—ಅನ್ಯೂನಾನತಿರಿಕ್ತ ವೃತ್ತಿಧರ್ಮ. ಅನತಿರಿಕ್ತ ದೇಶವೃತ್ತಿ. Delimiting.

**ಅವಯವಿ**—ಅವಯವದಿಂದ ಹುಟ್ಟಿದ ದ್ರವ್ಯ. Composite structure or product.

**ಅವ್ಯಾಪ್ತಿ**—ಲಕ್ಷ್ಯದ ಏಕದೇಶದಲ್ಲಿರುವುದು. Partial Inapplicability.

**ಅವ್ಯಾಪ್ಯ**—ವ್ಯಾಪ್ತಿ ಇಲ್ಲದಿರುವುದು. ವ್ಯಾಪ್ಯದ ಅಭಾವಇದ್ದಲ್ಲಿ ಇರುವುದು. Of limited application, Partial inherence.

**ಅವ್ಯಾಪ್ಯವೃತ್ತಿ**—ತನ್ನ ಅಭಾವ ಇದ್ದಲ್ಲಿ ಇರುವುದು. ತನ್ನ ಅಧಿಕರಣದಲ್ಲಿರುವ ಅಭಾವಕ್ಕೆ ಪ್ರತಿಯೋಗಿಯಾಗಿರುವುದು. Non-pervasive.

**ಅಸಮವಾಯಿಕಾರಣ**—ಕಾರ್ಯಕಾರಣ ಭಾವಸಂಬಂಧ ಹೊಂದಿ ಒಂದು ವಸ್ತುವಿನಲ್ಲಿ ಸಮವಾಯ ಸಂಬಂಧದಿಂದ ಇದ್ದು ಕಾರಣವಾಗುವುದು. Non-inherent cause, Accidental cause.

**ಅಸಾಧಾರಣಕಾರಣ**— ಕಾರ್ಯತ್ವಾತಿರಿಕ್ತಧರ್ಮಾವಚ್ಛಿನ್ನಕಾರ್ಯತಾ ನಿರೂಪಿತ ಕಾರಣತಾಶ್ರಯ. (ಕಾರ್ಯತ್ವಕ್ಕಿಂತ ಬೇರೆಯಾದ ಕಾರ್ಯದಲ್ಲಿರುವ ವಿಶೇಷ ಧರ್ಮದಿಂದ ಕೂಡಿದ ಕಾರ್ಯತೆಯಿಂದ ನಿರೂಪಿಸಲ್ಪಟ್ಟ ಕಾರಣತಾದಿಂದ ಕೂಡಿರುವುದು) Specific cause.

**ಅಸಾಧಾರಣಧರ್ಮ**—ಒಂದು ವಸ್ತುವಿನಲ್ಲಿದ್ದು ಅದಕ್ಕಿಂತ ಬೇರೆ ವಸ್ತುವಿನಲ್ಲಿ ಇಲ್ಲದಿರುವುದು. Specific quality or feature.

**ಆಕಾಂಕ್ಷಾ**— ಯಾವ ಪದವಿಲ್ಲದೆ ಯಾವ ಪದದ ಅನ್ವಯಬೋಧವುಂಟಾಗುವುದಿಲ್ಲವೋ ಆ ಪದದೊಡನೆ ಆ ಪದದ ಸೇರುವಿಕೆ. (ಸಾಮಿಪ್ಯ) ವಾಕ್ಯಶಕ್ತಿಯನ್ನುಂಟುಮಾಡುವುದು. Verbal or Syntactic expectancy.

**ಆಧಾರ**—ಅಧಿಕರಣ. ಆಶ್ರಯ. Substratum.

**ಆರಂಭಕ**—ಸಮವಾಯಿಕಾರಣ. ಅನೇಕಕಾರಣ ಸಂಯೋಗವಿದ್ದು ಕಾರ್ಯಜನಕವಾದದ್ದು. Material cause.

**ಆರೋಪ**—ಅದು (ಒಂದು ಧರ್ಮ) ಇಲ್ಲದಿರುವಲ್ಲಿ ಅದೇ (ಆ ಧರ್ಮವೇ) ಪ್ರಕಾರವಾಗಿರುವ ಜ್ಞಾನ. Super–imposition.

**ಆಶ್ರಯಾಸಿದ್ಧ**—ಪಕ್ಷತಾವಚ್ಛೇದಕವಿಲ್ಲದ ಪಕ್ಷ. Unestablished in respect of abode.

**ಆಹಾರ್ಯಜ್ಞಾನ**—ಬಾಧ ಇರುವಾಗಲೂ ಇಚ್ಛಾದಿಂದ ಉಂಟಾಗುವ ಜ್ಞಾನ. Knowledge by Supposition, Super-imposition.

**ಉತ್ತೇಜಕ**—ಪ್ರತಿಬಂಧಕವಿದ್ದರೂ ಕಾರ್ಯ ಹುಟ್ಟಿಸುವುದು. Instigating, Stimulating.

**ಉದಾಹರಣ**—ವ್ಯಾಪ್ತಿಪ್ರತಿಪಾದಕ ದೃಷ್ಟಾಂತವಚನ. Exemplification.

**ಉದ್ದೇಶ್ಯ**—ಇಚ್ಛಾವಿಷಯ. Subject.

**ಉದ್ಬೋಧಕ**—ಸ್ಮೃತಿಗೆ ಪ್ರಯೋಜಕ. ಉದ್ದೀಪಕವಾಗಿರುವುದು. Exciting, reminding.

**ಉದ್ಭೂತತ್ವ**— ರೂಪಾದಿವಿಶೇಷ ಗುಣಗಳಲ್ಲಿರುವ ಧರ್ಮ. Perceptibility.

**ಉಪನಯ**—ಪ್ರಕೃತ ಉದಾಹರಣೆಯಿಂದ ತೋರಿಸಿದ ವ್ಯಾಪ್ತಿಯುಳ್ಳ ಹೇತುವಿನಿಂದ ಕೂಡಿದ ಪಕ್ಷಬೋಧಕ ವಚನ. Subsumptive correlation.

**ಉಪಮಿತಿ**—ಸಂಜ್ಞಾಸಂಜ್ಞಿಸಂಬಂಧಜ್ಞಾನ. ಸಾದೃಶ್ಯದಿಂದ ಬಂದಜ್ಞಾನ. Knowledge of thing derived from analogy.

**ಉಪಲಕ್ಷಣ**—ಸ್ವಾರ್ಥಬೋಧಕವಾಗಿ ತನಗಿಂತ ಇತರಕ್ಕೂ ಬೋಧಕವಾದದ್ದು. ವಿಶೇಷ್ಯದಲ್ಲಿ ಯಾವಾಗಲಾದರೂಇದ್ದು ವ್ಯಾವರ್ತಕವಾದದ್ದು. Implying something not expressed.

**ಉಪಾಧಿ**—ಸಾಧ್ಯಕ್ಕೆ ವ್ಯಾಪಕವಾಗಿ ಸಾಧನಕ್ಕೆ ಅವ್ಯಾಪಕವಾಗಿರುವುದು. Adventitious condition, an attribute which is not a jati.

**ಕೇವಲವ್ಯತಿರೇಕಿ**—ಅನ್ವಯವ್ಯಾಪ್ತಿ ಶೂನ್ಯವಾಗಿ ವ್ಯತಿರೇಕವ್ಯಾಪ್ತಿಯಿಂದ ಕೂಡಿರುವುದು. Concomitant in negation alone.

**ಕೇವಲಾನ್ವಯಿ**—ಅತ್ಯಂತಾಭಾವದ ಪ್ರತಿಯೋಗಿಯ ಪ್ರತಿಯೋಗಿತೆಯಲ್ಲಿ ಅವಚ್ಛೇದಕವಾಗದಿರುವ ಧರ್ಮವುಳ್ಳದ್ದು. Concomitant in affirmation alone.

**ಕೋಟಿ**—ಸಂಶಯವನ್ನು ಹುಟ್ಟಿಸುವ ಜ್ಞಾನದಲ್ಲಿ ಪ್ರಕಾರವಾಗಿರುವುದು. Alternative.

**ಘಟಕ**—ತನ್ನಿಂದ ಕೂಡಿರುವುದು. Constituent part.

**ಜನಕ**—ಅನ್ಯಥಾ ಸಿದ್ಧವಾಗದೆ ಕಾರ್ಯಕ್ಕೆ ನಿಯತಪೂರ್ವ ವೃತ್ತಿಯಾಗಿರುವುದು. Begetting, Generative

**ತರ್ಕ**—ಅನಿಷ್ಟಾಪಾದನ. ವ್ಯಾಪ್ಯದ ಆರೋಪದಿಂದ ವ್ಯಾಪಕದ ಆರೋಪ. ವ್ಯಭಿಚಾರಶಂಕಾನಿವರ್ತಕವಾಗಿರುವುದು. Reductio ad absurdum; indirect argument.

**ದೋಷ**—ಭ್ರಮೆಯನ್ನು ಹುಟ್ಟಿಸುವುದು. ಕಾರ್ಯ ವಿರೋಧಿ. Defect.

**ನಿರ್ವಿಕಲ್ಪಕ**—ವಸ್ತುಸ್ವರೂಪಮಾತ್ರಗ್ರಹಣ. ಸಂಸರ್ಗವನ್ನು ಗ್ರಹಿಸದಿರುವ ಜ್ಞಾನ. Indeterminate.

**ಪಕ್ಷ**—ಅನುಮಿತಿಗೆ ಉದ್ದೇಶ. ಸಂದಿಗ್ಧ ಸಾಧ್ಯವುಳ್ಳದ್ದು. Minor term, Subject.

**ಪರಮಾಣು**—ಮೂರ್ತವಾಗಿ ಅವಯವ ಶೂನ್ಯವಾಗಿರುವುದು. Atom.

**ಪರಾಮರ್ಶ**—ವ್ಯಾಪ್ತಿವಿಶಿಷ್ಟ ಪಕ್ಷಧರ್ಮತಾಜ್ಞಾನ. Subsumptive reflection.

**ಪರಾರ್ಥಾನುಮಾನ**—ನ್ಯಾಯಪ್ರಯೋಜ್ಯ ಅನುಮಾನ. Inference for others.

**ಪರಿಶೇಷಾನುಮಾನ**—ವಿಶೇಷಾಭಾವ ಸಹಕೃತವಾಗಿ ಸಾಮಾನ್ಯ ಹೇತುವಿನಿಂದ ಕೂಡಿದ ಅನುಮಾನ. Supplemental analogy.

**ಪೂರ್ವಪಕ್ಷ**—ಸಿದ್ಧಾಂತಕ್ಕೆ ವಿರುದ್ಧವಾದ ಕೋಟಿ. Prima facie view.

**ಪ್ರಕಾರ**—ಸಾಮಾನ್ಯ ಭೇದಕ ವಿಶೇಷಣ. Adjunct.

**ಪ್ರತಿಜ್ಞಾ**—ಸಾಧ್ಯದಿಂದಕೂಡಿದ ಪಕ್ಷಬೋಧಜನಕವಚನ. Thesis.

**ಪ್ರತಿಬಂಧಕ**—ಕಾರಣವಿದ್ದರೂ ಕಾರ್ಯ ಹುಟ್ಟದಂತೆ ಮಾಡುವುದು. Counter-agent.

**ಪ್ರತಿಯೋಗಿ**—ಯಾವುದರ ಅಭಾವ ಹೇಳುತ್ತೇವೋ ಅದು. ಧರ್ಮಿಭಿನ್ನವಾಗಿದ್ದು ಭೇದನಿರೂಪಕವಾಗಿರುವುದು. Correlative, counter-correlative.

**ಪ್ರಮಾ**—ಪ್ರಮಾಣದಿಂದ ಹುಟ್ಟಿದ ಜ್ಞಾನ. Valid knowledge.

**ಪ್ರಮಾಣ**—ಪ್ರಮೆಯನ್ನು ಹುಟ್ಟಿಸುವುದು. Means of valid knowledge.

**ಪ್ರಮೇಯ**—ಪ್ರಮಾಜ್ಞಾನಕ್ಕೆ ವಿಷಯವಾದದ್ದು. Object of valid knowledge.

**ಪ್ರಯೋಜಕ**—ಸಾಕ್ಷಾತ್ತಾಗಿ ಅಥವಾ ಪರಂಪರೆಯಿಂದ ಕಾರಣ. Promoter.

**ಪ್ರಾಗಭಾವ**—ಹುಟ್ಟದೆ ನಾಶವಾಗುವ ಅಭಾವ. ಪೂರ್ವದಲ್ಲಿರುವ ಅಭಾವ. Antecedent non-existence.

**ಫಲೋಪಧಾಯಕ**—ಕಾರ್ಯದ ಅವ್ಯವಹಿತ ಪೂರ್ವದಲ್ಲಿದ್ದು ಫಲವಿಂದ ಕೂಡಿರುವುದು. Immediate cause for any fruit.

**ಬಾಧ**—ಪಕ್ಷದಲ್ಲಿರುವ ಸಾಧ್ಯಾಭಾವ. Lack of harmony, contradicted reason.

**ಭೂತ**—ಬಹಿರಿಂದ್ರಿಯಗಳಿಂದ ಗ್ರಹಿಸಲ್ಪಡುವ ಗುಣವುಳ್ಳವುಗಳು. Elemental beings.

**ಮೂರ್ತ**—ಕ್ರಿಯೆಯುಳ್ಳ ದ್ರವ್ಯ. Moving Substance.

**ಯಥಾರ್ಥಜ್ಞಾನ**—(ಬಾಧವಿಲ್ಲದ) ಅಬಾಧಿತಾರ್ಥವಿಷಯಕ ಜ್ಞಾನ. ಇದ್ದುದನ್ನು ಇದ್ದಂತೇ ತಿಳಿಯುವ ಜ್ಞಾನ. Real knowledge.

**ಲಕ್ಷಣ**—ಇತರ ಭೇದ ಜ್ಞಾಪಕ ಅಸಾಧಾರಣ ಧರ್ಮ ಪ್ರತಿಪಾದಕವಾಕ್ಯ. Definition.

**ವಿಭು**—ಎಲ್ಲಾ ಮೂರ್ತ ಪದಾರ್ಥಗಳ ಸಂಬಂಧವುಳ್ಳದ್ದು. (ಸರ್ವಮೂರ್ತ ದ್ರವ್ಯ ಸಂಯೋಗಿ) Pervading.

**ವ್ಯತಿರೇಕವ್ಯಭಿಚಾರ**—ಕಾರಣವಿಲ್ಲದಿರುವಾಗ ಕಾರ್ಯ ಇರುವುದು. Sequence of Negative factors.

**ವ್ಯತಿರೇಕವ್ಯಾಪ್ತಿ**—ಹೇತುವಿನ ಅಭಾವಕ್ಕೂ ಸಾಧ್ಯದ ಅಭಾವಕ್ಕೂ ಇರುವ ವ್ಯಾಪ್ತಿ (ನಿಯತ ಸಂಬಂಧ) Negative concomitance, Negative generalisation.

**ವ್ಯತಿರೇಕ ಸಹಚಾರ**—ಕಾರಣವಿಲ್ಲದಿರುವಾಗ ಕಾರ್ಯ ಇಲ್ಲದಿರುವುದು. Concomitance of Negation.

**ವ್ಯತಿರೇಕ**—ಒಂದು ಇಲ್ಲದಿದ್ದರೆ ಇನ್ನೊಂದು ಇಲ್ಲದಿರುವುದು. Logical discontinuance.

**ವ್ಯಧಿಕರಣ**—ಆ ಅಧಿಕರಣದಲ್ಲಿ ಇಲ್ಲದಿರುವುದು. Incongruity.

**ವ್ಯಭಿಚಾರ**—ಸಾಧ್ಯ ಇಲ್ಲದಿರುವಲ್ಲಿ ಇರುವುದು. Fallacious reasoning, wandering from argument.

**ವ್ಯವಸಾಯ**—ಮೊದಲಿನ ಜ್ಞಾನ. Cognition in which the object is presented and not the Subject.

**ವ್ಯವಹಾರ**—ಕಾರ್ಯಾನುಕೂಲ ಶಬ್ದ ಪ್ರಯೋಗ. Conduct.

**ವ್ಯಾಪಾರ**— ಒಂದು ವಸ್ತುವಿನಿಂದ ಹುಟ್ಟಿ ಆ ವಸ್ತುವಿನಿಂದ ಹುಟ್ಟಿದ ಕಾರ್ಯಕ್ಕೆ ತಾನೂ ಕಾರಣವಾಗಿರುವುದು. (ತಜ್ಜನ್ಯತ್ವೇ ಸತಿ ತಜ್ಜನ್ಯ ಜನಕತ್ವಂ) ದಂಡದಿಂದ ಹುಟ್ಟಿದ ಭ್ರಮಣವು ವ್ಯಾಪಾರವಾಗುತ್ತದೆ. Intermediate cause.

**ವ್ಯಾಪ್ತಿ**— ಒಂದು ಇದ್ದಲ್ಲಿ ಒಂದು ನಿಯಮದಿಂದ ಇರುವುದು. ಸಾಧ್ಯಸಾಧನಗಳಿಗಿರುವ ಅವ್ಯಭಿಚರಿತ ಸಂಬಂಧ. ಎರಡಕ್ಕಿರುವ ಸ್ವಾಭಾವಿಕ ಸಂಬಂಧ. (ಧೂಮವಹ್ನಿಗಳಿಗೆ ವ್ಯಾಪ್ತಿ ಇದೆ) Co-extension. invariable concomitance.

**ವ್ಯಾಪಕ**— ವ್ಯಾಪ್ಯ ಇದ್ದಲ್ಲಿ ಇರುವುದು. ಅಧಿಕದೇಶದಲ್ಲಿರುತ್ತದೆ.(ಸಾಧ್ಯ= ವಹ್ನ್ಯಾದಿ) Comprehensive, extending.

**ವ್ಯಾಪ್ಯ**— ವ್ಯಾಪ್ತಿಯಿಂದ ಕೂಡಿರುವುದು. ಅಲ್ಪದೇಶದಲ್ಲಿರುವುದು. (ಹೇತು. ಧೂಮಾದಿ) Permeable.

**ವ್ಯಾವರ್ತಕ**— ಲಕ್ಷ್ಯದಲ್ಲಿದ್ದು ಉಳಿದೆಲ್ಲವನ್ನು ವ್ಯಾವೃತ್ತಿ ಪಡಿಸುವುದು. (ಅಸಾಧಾರಣ ಧರ್ಮ) Differentiating feature.

**ವ್ಯುತ್ಪತ್ತಿ**— ಶಕ್ತಿಜ್ಞಾನದಿಂದ ಉಂಟಾದ ಸಂಸ್ಕಾರ. ಸಮುದಾಯ ಶಬ್ದಕ್ಕೆ ಅವಯವದಿಂದ ಅರ್ಥಬೋಧಕವಾದ ಶಕ್ತಿ. Origin, etymology, derivation.

**ಶಕ್ತ**— ಶಕ್ತಿಗೆ ಆಶ್ರಯವಾದದ್ದು. Potent agent.

**ಶಕ್ತಿ**— ಕಾರ್ಯ ಹುಟ್ಟಿಸುವ ಕಾರಣದ ಸಾಮರ್ಥ್ಯ. ಇಚ್ಛಾ Potentiality, Significative potency.

**ಶಾಬ್ದಬೋಧ**— ಶಬ್ದದಿಂದ ಬಂದ ಬೋಧ. ಒಂದು ಪದಾರ್ಥದಲ್ಲಿ ಇನ್ನೊಂದು ಪದಾರ್ಥದ ಸಂಬಂಧ ವಿಷಯಕ ಜ್ಞಾನ. Verbal cognition.

**ಸಂಗ್ರಹ**— ಸಂಕ್ಷೇಪದಿಂದ ಸ್ವರೂಪ ಹೇಳುವುದು. Abridged. restrained.

**ಸಮನಿಯತ**— ಒಂದಕ್ಕೆ ವ್ಯಾಪ್ಯವೂ ವ್ಯಾಪಕವೂ ಆಗಿರುವುದು. Invariable concomitant.

**ಸಮವಾಯ**—ಅಯುತಸಿದ್ಧಗಳಿಗಿರುವ ಸಂಬಂಧ. ನಿತ್ಯಸಂಬಂಧ. Inherence.

**ಸಮವಾಯಿಕಾರಣ** - ಸಮವಾಯದಿಂದ ಹುಟ್ಟುವ ಕಾರ್ಯಕ್ಕೆ ತಾದಾತ್ಮ್ಯದಿಂದ ಕಾರಣವಾಗಿರುವುದು. Inherent or material cause.

**ಸಮಾನಾಧಿಕರಣತ್ವ**—ಒಂದೇ ಅಧಿಕರಣದಲ್ಲಿರುವಿಕೆ. Co-existence.

**ಸಾಮಾನಾಧಿಕರಣ್ಯ**—**ಸಮಾನವಿಭಕ್ತ್ಯಂತ**ವಾಗಿ ಏಕಾರ್ಥದಲ್ಲಿರುವುದು. Predicative correlation.

**ಸಮೂಹಾಲಂಬನ**—ನಾನಾಧರ್ಮಿಯನ್ನು ಗ್ರಹಿಸುವ ಒಂದು ಜ್ಞಾನ. Group cognition.

**ಸವಿಕಲ್ಪಕ**—ವೈಶಿಷ್ಟ್ಯಾವಗಾಹಿಜ್ಞಾನ. (ಘಟಮಹಂ ಜಾನಾಮಿ) Determinate.

**ಸಾಧಾರಣಧರ್ಮ**—ಒಂದರಲ್ಲಿದ್ದು ಅದಕ್ಕಿಂತ ಬೇರೆ ವಸ್ತುವಿನಲ್ಲಿಯೂ ಇರುವುದು. ವಸ್ತುವಿನಲ್ಲಿರುವ ಸಾಮಾನ್ಯ ಧರ್ಮ. (ಸಾಧ್ಯತಾ) General quality.

**ಸಾಧನ**—ವ್ಯಾಪ್ತಿಗೆ ಆಧಾರವಾಗಿರುವುದು. ಕರಣಕಾರಕ (ಧೂಮಾದಿ) Probans, Middle term.

**ಸಾಧಾರಣಕಾರಣ**—ಕಾರ್ಯತಾದಿಂದ ಕೂಡಿದ ಕಾರ್ಯಕ್ಕೆ ಕಾರಣವಾಗಿರುವುದು. General Cause.

**ಸಾಧ್ಯ**—ವ್ಯಾಪ್ತಿಗೆ ನಿರೂಪಕವಾಗಿರುವುದು. Probandum.

**ಸಾಮಾನ್ಯ**—ನಿತ್ಯವಾಗಿ ಏಕವಾಗಿ ಸಮವಾಯದಿಂದ ಇರುವುದು. ಜಾತಿ. Generality.

**ಸಿದ್ಧಸಾಧನ**—ಪ್ರಮಾಣಾಂತರದಿಂದ ಸಿದ್ಧವಾದ ಅರ್ಥವನ್ನು ಸಾಧಿಸುವುದು. Establishing the established.

**ಸಿದ್ಧಾಂತ**—ಬಾಧವಿಲ್ಲದ ನಿಶ್ಚಯ. Established conclusion.

**ಸಂಶಯ**—ಒಂದು ಧರ್ಮಿಯಲ್ಲಿ ವಿರುದ್ಧಕೋಟಿದ್ವಯವನ್ನು ಗ್ರಹಿಸುವ ಜ್ಞಾನ. ವಿರುದ್ಧ ನಾನಾಧರ್ಮವನ್ನು ಗ್ರಹಿಸುವ ಜ್ಞಾನ. Doubt.

**ಸಂಸರ್ಗಾಭಾವ**—ತಾದಾತ್ಮ್ಯಕ್ಕಿಂತ ಭಿನ್ನಸಂಬಂಧದಿಂದ ಇರುವ ಅಭಾವ. Negation by contact.

**ಸಂಸ್ಕಾರ**—ಅನುಭವದಿಂದ ಹುಟ್ಟಿ ಸ್ಮೃತಿಗೆ ಕಾರಣವಾದದ್ದು.
Impression.

**ಸ್ಮೃತಿ**—ಉದ್ಭೂತ ಸಂಸ್ಕಾರದಿಂದ ಹುಟ್ಟಿದ ಜ್ಞಾನ. Recollection.

**ಸ್ವತಃಪ್ರಮಾಣ**—ಇನ್ನೊಂದು ಪ್ರಮಾಣದ ಅಪೇಕ್ಷೆ ಇಲ್ಲದೆ ತನ್ನ ಅರ್ಥ ತಿಳಿಸಲು ಸಮರ್ಥವಾದದ್ದು. Self-evident.

**ಸ್ವರೂಪಯೋಗ್ಯ**—ಕಾರಣದಲ್ಲಿರುವ ಅಸಾಧಾರಣ ಧರ್ಮದಿಂದ ಕೂಡಿರುವುದು. ಅರಣ್ಯದಲ್ಲಿರುವ ದಂಡದಲ್ಲಿಯೂ ಘಟಕಾರಣವಾದ ದಂಡದಲ್ಲಿರುವ ದಂಡತ್ವ ಧರ್ಮವಿರುವುದರಿಂದ ಅದು ಸ್ವರೂಪ ಯೋಗ್ಯ. Special relation.

**ಸ್ವರೂಪಸಂಬಂಧ**—ಪ್ರತಿಯೋಗಿ ಅಥವಾ ಅನುಯೋಗಿ ಇವೆರಡರಲ್ಲಿ ಒಂದು ಸಂಬಂಧ. ಇತರ ಸಂಯೋಗಾದಿ ಸಂಬಂಧವಿಲ್ಲದೆ ವಿಶಿಷ್ಟ ಜ್ಞಾನವನ್ನುಂಟುಮಾಡುತ್ತದೆ. Self-relation.

**ಸ್ವರೂಪಾಸಿದ್ಧ**—ಹೇತುವಿಲ್ಲದಿರುವ ಪಕ್ಷ. ಪಕ್ಷದಲ್ಲಿ ಇಲ್ಲದಿರುವುದು.
Unestablisted in respect of itself.

**ಸ್ವಾರ್ಥಾನುಮಾನ**—ನ್ಯಾಯಪ್ರಯೋಗವಿಲ್ಲದೆ ಇರುವ ಅನುಮಾನ.
Inference for one self.

**ಸ್ವಾರ್ಥಾನುಮಿತಿ**—ತನಗೆ ವ್ಯಾಪ್ಯಜ್ಞಾನವುಂಟಾದ ಮೇಲೆ ಬರುವ ವ್ಯಾಪಕ ಜ್ಞಾನ. Inference for one's own benefit.

**ಹೇತು**—ಸಾಧ್ಯದ ಜ್ಞಾನವನ್ನುಂಟುಮಾಡುವ ವಚನ. ತೃತೀಯಾಂತ ಅಥವಾ ಪಂಚಮ್ಯಂತಪದ. ಪ್ರತಿಜ್ಞಾವಾಕ್ಯದಿಂದುಂಟಾದ ಕಾರಣಾಕಾಂಕ್ಷೆಯನ್ನು ಹೋಗಲಾಡಿಸುವ ಜ್ಞಾನಜನಕಶಬ್ದ.
Probans, Reason, Middle term.

**ಹೇತ್ವಾಭಾಸ**—ಹೇತುವಿನಂತೆ ಪಂಚಮ್ಯಂತ ತೃತೀಯಾಂತವಾಗಿ ತೋರುವುದು. ಅನುಮಿತಿಗೆ ಕಾರಣೀಭೂತವಾದ ಅಭಾವಕ್ಕೆ ಪ್ರತಿಯೋಗಿಯಾಗಿರುವ ಯಥಾರ್ಥಜ್ಞಾನಕ್ಕೆ ವಿಷಯವಾಗಿರುವುದು.
Fallacious reason, Semblance of reason. Defective probans.

# ಶುದ್ಧಾಶುದ್ಧ ಪತ್ರಿಕೆ.

| ಪು. ಪಂ. | ಅಶುದ್ಧ | | ಶುದ್ಧ |
|---|---|---|---|
| ೩– ೧ | ದರಿಂವ | – | ದರಿಂದ |
| ೫– ೭ | ಲಕ್ಷತಾ | – | ಲಕ್ಷ್ಯತಾ |
| ೧೭ | ತಾತ್ಚ | – | ತ್ಯಾಶ್ಚ |
| ೭–೨೦ | ವಾಗುವುದ | – | ವಾಗದಿರುವು |
| ೮– ೪ | ಅಪ್ಯಾಪ್ತ | – | ಅವ್ಯಾಪ್ತ |
| ೭ | ಯಾವು | – | ಯಾವ |
| ೯– ೬ | ವಿದ್ದಲ್ಲಿ | – | ವಿದ್ದಲ್ಲೆಲ್ಲಾ |
| ೧೧– ೧ | ಲ್ಲಿರುಪ | – | ಲ್ಲಿರುವ |
| ೧೪– ೪ | ಕಟುಃ | – | ಕಟು. |
| ೨೪–೬+೧೩ | ಯತಾರ್ಥ | – | ಯಥಾರ್ಥ |
| ೨೫–೨+ ೭ | ಯತಾರ್ಥಾ | | ಯಥಾರ್ಥ |
| ೨೪– | ತತ್ವಾಭಾವ | | ತತ್ವಾಭಾವವ |
| | ದ್ರಂಗ | – | ದ್ರಂಗ |
| ೨೬– ೨೩ | ಜನತೇ | – | ಜನ್ಯತ್ವೇ |
| ೨೮– ೨೪ | ಕಾರಣ | – | ಕಾರಣಂ |
| ೨೫ | ರೂಪವನು | – | ರೂಪವನ್ನು |
| ೨೯– ೧ | ತಾದಾತ್ಮ | – | ತಾದಾತ್ಮ್ಯ |
| ೨೯– ೩ | ತದೋ | – | ತ್ತದೋ |
| ೩೧– ೭ | ತಚ್ಛಿನ್ನ | – | ತಾವಚ್ಛಿನ್ನ |
| ೨೬ | ನೂಲ | – | ನೂಲು |
| ೩೨– ೧ | ತಪೇತ್ರಿ | – | ತವೇತತ್ರಿ |
| ೭ | ಥರ್ಮ | – | ಧರ್ಮ |
| ೪೧–೨೨ | ತಾಚ್ಛಾಲಿ | – | ಚ್ಛಾಲಿ |
| ೪೨–೧೨ | ವೈಶಿಷ್ಟ | – | ವೈಶಿಷ್ಟ್ಯ |
| ೪೬–೧೫ | ಪರ್ವ | – | ಪರ್ವತ |
| ೪೭– ೨ | ಅನುಮತಿ | – | ಅನುಮಿತಿ |
| –೧೭ | ಅನುಮತಿ | – | ಅನುಮಿತಿ |
| ೫೪–೧೫ | ಅನುಮತಿ | – | ಅನುಮಿತಿ |
| ೫೫–೨೬ | ಅನುಮತಿ | – | ಅನುಮಿತಿ |
| ೫೭– ೯ | ಅನುಮತಿ | – | ಅನುಮಿತಿ |
| ೫೪–೧೫ | ತ್ವಾಚ್ಛಿನ್ನ | – | ತ್ವಾವಚ್ಛಿನ್ನ |
| ೫೫– ೫ | ಭೇಧಾ | – | ಭೇದಾ |
| ೬೬–೨೪ | ಉಷ | – | ಉಷ್ಣ |
| ೭೩– ೬ | ಭೋಧ | – | ಬೋಧ |
| ೭೪–೧೨ | ಪ್ರಮಾಮ್ | | ಪ್ರಮಾಣಮ್ |
| ೭೫– ೯ | ತತ್ವದಲ್ಲಿ | – | ತತ್ವದದಲ್ಲಿ |
| ೭೬– ೬ | ಜಾಮಾ | – | ಜಾಮು |
| ೨೫ | ರಾಬ್ದ | – | ಶಾಬ್ದ |



ಈ ಗ್ರಂಥಕರ್ತರು ದಕ್ಷಿಣ ಕನ್ನಡ ಜಿಲ್ಲೆಯ ಗುಂಡ್ಮಿ ಎಂಬ ಗ್ರಾಮದಲ್ಲಿ 1918 ರಲ್ಲಿ ಜನಿಸಿದರು. ವ್ಯಾಕರಣ, ತರ್ಕ, ಸಾಹಿತ್ಯ, ವೇದಾಂತಶಾಸ್ತ್ರಗಳ ಪ್ರೌಢ ವಿದ್ಯಾಭ್ಯಾಸವು ಮೈಸೂರು ಶ್ರೀಮನ್ಮಹಾರಾಜ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ನೆರವೇರಿ ಅಲ್ಲಿಯೇ ಸಾಹಿತ್ಯ ಉಪಪ್ರಾಧ್ಯಾಪಕರಾಗಿ ನಿಯ ಮಿತರಾಗಿದ್ದಾರೆ. ಮದ್ರಾಸು ಯೂನಿವರ್ಸಿಟಿಯ ಕನ್ನಡ ವಿದ್ವತ್ ಪರೀಕ್ಷೆ, ಹಿಂದೀ ಪ್ರಚಾರ ಸಭೆಯ ರಾಷ್ಟ್ರಭಾಷಾ ವಿಶಾರದ ಪರೀಕ್ಷೆಗಳಲ್ಲಿ ಉತ್ತೀರ್ಣ ರಾಗಿ ಅನೇಕ ಭಾಷಾ ಪಾಂಡಿತ್ಯವನ್ನೂ ಪಡೆದಿರುತ್ತಾರೆ. ಈಗ ಕರ್ಣಾಟಕ ಬಂಧುಗಳಿಗೆ ಶಾಸ್ತ್ರ ಪರಿಚಯವನ್ನು ಸುಲಭವಾಗಿಮಾಡಿಸಿಕೊಡಲು 'ಲಘು ಸಿದ್ಧಾಂತಕೌಮುದೀ' 'ಚಂದ್ರಾಲೋಕ' 'ವೃತ್ತರತ್ನಾಕರ' 'ತರ್ಕಸಂಗ್ರಹ ಗ್ರಂಥಗಳಿಗೆ ಕನ್ನಡದಲ್ಲಿ ವ್ಯಾಖ್ಯಾನ ಬರೆದು ಪ್ರಕಾಶಪಡಿಸಿರುತ್ತಾರೆ. ಇವರ ಮುಂದಿನ 'ಸಿದ್ಧಾಂತಕೌಮುದೀ' 'ಮಹಾಭಾಷ್ಯ' 'ಷಡ್ಭಾಷಾಚಂದ್ರಿಕಾ 'ಮುಕ್ತಾವಳೀ' ಮುಂತಾದ ಅಮೂಲ್ಯ ಗ್ರಂಥಗಳು ಬೇಗ ಪ್ರಕಾಶಿತ ವಾಗುವುವಾಗಿ ಅವರು ಕರ್ಣಾಟ ಸಹೋದರರ ಆದರಕ್ಕೆ ಪಾತ್ರರಾಗಲೆಂದ ಹಾರೈಸುತ್ತೇನೆ.

**ಮಾ. ದೇವೇಗೌಡ**

ಮೈಸೂರು.